KA / BG-GPO/2515/WPP-47/2006-2008 ಸುವರ್ಣ ಕರ್ನಾಟಕ 2006



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೧ | ಬೆಂಗಳೂರು, ಗುರುವಾರ, ಜನವರಿ ೧೨, ೨೦೦೬ (ಪುಷ್ಯ ೨೨, ಶಕ ವರ್ಷ ೧೯೨೭) | ಸಂಚಿಕೆ ೨ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಹಕಾರ ಸಚಿವಾಲಯ

**ವಿಷಯ :** ಹೇಮಾವತಿ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) ಶ್ರೀನಿವಾಸಪುರ, ಹಾಸನ ಜಿಲ್ಲೆ, ಇದರ ಆಡಳಿತಾಧಿಕಾರಿಗಳ ಅಧಿಕಾರದ ಅವಧಿಯನ್ನು ವಿಸ್ತರಿಸುವ ಬಗ್ಗೆ ಆದೇಶ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಸಮತು 05 ಸಸಕಾ 2003, ದಿನಾಂಕ:10.11.2004.
2. ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ರವರ ಪತ್ರ ಸಂಖ್ಯೆ: ಡಿಎಸ್‌ಕೆ/ ಇಎಸ್‌ಟಿಎಸ್/ 139-2002-03 ದಿನಾಂಕ: 03.05.2005 ಮತ್ತು 07.06.2005.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಆದೇಶದಲ್ಲಿ ಹೇಮಾವತಿ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) ಶ್ರೀನಿವಾಸಪುರ, ಹಾಸನ ಜಿಲ್ಲೆ ಇದರ ಆಡಳಿತಾಧಿಕಾರಿಗಳ ಹುದ್ದೆಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಪ್ರಕರಣ 121 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅಧಿನಿಯಮ 30 (1)ಕ್ಕೆ ಮಾರ್ಪಾಡು ಮಾಡಿ ದಿನಾಂಕ: 19.06.2005 ರವರೆಗೆ ಆಡಳಿತಾಧಿಕಾರಿ ಹುದ್ದೆಯನ್ನು ಮುಂದುವರಿಸಲಾಗಿದೆ. ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಮೇಲೆ ಓದಲಾದ ಕ್ರ.ಸಂ.(2)ರ ಪತ್ರಗಳಲ್ಲಿ ವರದಿ ಮಾಡುತ್ತಾ ಕಾರ್ಖಾನೆಯ ಆಡಳಿತ ಮಂಡಳಿಯನ್ನು ರದ್ದುಗೊಳಿಸಿದ ಕ್ರಮವನ್ನು ಹಿಂದಿನ ಆಡಳಿತ ಮಂಡಳಿಯ ಸದಸ್ಯರು ಪ್ರಶ್ನಿಸಿ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ದಾಖಲಿಸಿದ್ದು, ಸದರಿ ಅರ್ಜಿಯು ಈವರೆವಿಗೂ ಇತ್ಯರ್ಥವಾಗಿರುವುದಿಲ್ಲ. ಆಡಳಿತಾಧಿಕಾರಿಗಳ ಅಧಿಕಾರದ ಅವಧಿಯು ದಿನಾಂಕ: 19.06.2005ಕ್ಕೆ ಕೊನೆಗೊಳ್ಳಲಿದೆ. ಸದ್ಯದಲ್ಲಿ ಜಿಲ್ಲಾ ಪಂಚಾಯತ್ ಹಾಗೂ ತಾಲ್ಲೂಕು ಪಂಚಾಯತ್ ಚುನಾವಣೆ ಪ್ರಕ್ರಿಯೆ ಸಂಬಂಧದಲ್ಲಿ ಹೇಮಾವತಿ ಸಹಕಾರಿ ಸಕ್ಕರೆ ಕಾರ್ಖಾನೆಯ ಆಡಳಿತಾಧಿಕಾರಿಗಳ ಅಧಿಕಾರದ ಅವಧಿಯನ್ನು 6 ತಿಂಗಳು ಅಂದರೆ 31.12.2005ರವರೆಗೆ ವಿಸ್ತರಣೆ ಮಾಡುವಂತೆ ಕೇಳಿರುತ್ತಾರೆ.

ಮೇಲ್ಕಂಡ ಪ್ರಸ್ತಾವನೆಯಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಇ 186 ಸಸಕಾ 2005, ಬೆಂಗಳೂರು, ದಿನಾಂಕ: 26ನೇ ನವೆಂಬರ್, 2005**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 121 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಹೇಮಾವತಿ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) ಶ್ರೀನಿವಾಸಪುರ ಹಾಸನ ಜಿಲ್ಲೆ, ಇದರ ಆಡಳಿತಾಧಿಕಾರಿಗಳ ಅಧಿಕಾರದ ಅವಧಿಯನ್ನು ದಿನಾಂಕ: 20.06.2005ರಿಂದ 6 ತಿಂಗಳ ಅವಧಿಗೆ ಅಂದರೆ 31.12.2005 ರವರೆಗೆ ಅಥವಾ ಉಚ್ಚ ನ್ಯಾಯಾಲಯದಲ್ಲಿನ ರಿಟ್ ಅರ್ಜಿ ಸಂಖ್ಯೆ: 29748/ 2003 ಇತ್ಯರ್ಥವಾಗುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ವಿಸ್ತರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಾಣದ ರಂಗಪ್ಪ**

ಪಿ.ಆರ್.1713

ಸರ್ಕಾರದ ಅಧೀನ ಕಾರ್ಯದರ್ಶಿ,

ಸಹಕಾರ ಇಲಾಖೆ.

**ವಿಷಯ :** ಶ್ರೀ ಭಾಗ್ಯಲಕ್ಷ್ಮಿ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) ಖಾನಾಪುರ ಇದರ ಆಡಳಿತಾಧಿಕಾರಿಗಳ ಅವಧಿಯನ್ನು ವಿಸ್ತರಿಸುವ ಕುರಿತು-ಆದೇಶ.

**ಓದಲಾಗಿದೆ :** ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ರವರ ಪತ್ರ ಸಂಖ್ಯೆ: ಡಿಎಸ್‌ಕೆ/ ಇಎನ್‌ಟಿಎಸ್/ 108/ 2003-04, ದಿನಾಂಕ: 14.06.2005.

**ಪ್ರಸ್ತಾವನೆ:**

ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಮೇಲೆ ಓದಲಾದ ಪತ್ರದಲ್ಲಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ, ಶ್ರೀ ಭಾಗ್ಯಲಕ್ಷ್ಮಿ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) ಖಾನಾಪುರ, ಬೆಳಗಾವಿ ಜಿಲ್ಲೆ ಇದರ ಆಡಳಿತಾಧಿಕಾರಿಗಳ ಅಧಿಕಾರದ ಅವಧಿಯನ್ನು ಸಕ್ಕರೆ ನಿರ್ದೇಶನಾಲಯದ ಆದೇಶ ದಿನಾಂಕ: 09.12.2004ರಲ್ಲಿ ದಿನಾಂಕ: 04.12.2004 ರಿಂದ 6 ತಿಂಗಳ ಅವಧಿಗೆ ವಿಸ್ತರಿಸಲಾಗಿದೆ. ಸದರಿ ಅವಧಿಯು ದಿನಾಂಕ: 03.06.2005ಕ್ಕೆ ಕೊನೆಗೊಳ್ಳಲಿದ್ದು ಕಾರ್ಖಾನೆಯ ಆರ್ಥಿಕ ಪರಿಸ್ಥಿತಿ ಸುಧಾರಿಸಿಲ್ಲವಾದ ಪ್ರಯುಕ್ತ ಪ್ರಸ್ತುತ ಚುನಾವಣಾ ವೆಚ್ಚ ಭರಿಸಲು ಸಾಧ್ಯವಿಲ್ಲವಾದ್ದರಿಂದ, ಸದರಿ ಆಡಳಿತಾಧಿಕಾರಿಗಳ ಅಧಿಕಾರದ ಅವಧಿಯನ್ನು ಕರ್ನಾಟಕ ಸಹಕಾರಿ ಸಂಘಗಳ ಕಾಯ್ದೆ 1959ರ ಕಲಂ 121 ರಡಿ 1 ವರ್ಷದ ಅವಧಿಗೆ ವಿಸ್ತರಿಸಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ. ಅದರಂತೆ ಈ ಆದೇಶ.

**ಆದೇಶ ಸಂಖ್ಯೆ: ಸಇ 234 ಸಸಕಾ 2005, ಬೆಂಗಳೂರು, ದಿನಾಂಕ: 26ನೇ ನವೆಂಬರ್, 2005**

ಭಾಗ್ಯಲಕ್ಷ್ಮಿ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) ಖಾನಾಪುರ, ಬೆಳಗಾಂ ಜಿಲ್ಲೆ ಇದರ ಆಡಳಿತಾಧಿಕಾರಿಗಳ ಅಧಿಕಾರದ ಅವಧಿಯನ್ನು ಕರ್ನಾಟಕ ಸಹಕಾರಿ ಸಂಘಗಳ ಕಾಯ್ದೆ 1954ರ ಕಲಂ 121 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ದಿನಾಂಕ: 04.06.2005ರಿಂದ 1 ವರ್ಷದ ಅವಧಿಗೆ ವಿಸ್ತರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಾಣದ ರಂಗಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಹಕಾರ ಇಲಾಖೆ.

ಪಿ.ಆರ್.1714

## INFRASTRUCTURE DEVELOPMENT SECRETARIAT

**Sub :** Aerodrome India 2005-Exhibition and Seminar-7-10, December 2005 Sponsoring the Seminar-Tech Sessions by Infrastructure Development Department.

**Read :** Letter Dated: 19.09.2005 of the Chairman and CEO of PDA Trade Affairs.

**Preamble:**

In the above read letter the Chairman and CEO, PDA TRADEAFFAIRS, Society for Indian Aerospace Technologies and Industries (SIATI) & Airports Council International (ACI, the worlds governing body for Airports) and has offered the State Govt. of Karnataka the status of "Chief Sponsor for Technical Sessions" in Aerodrome India 2005 Exhibition and Seminar to be held in Bangalore from 7-10, December 2005, which would accord the benefits of display advertisement etc.

The proposal was considered. It was been agreed to release of Rs.3.00 lakhs as financial through IBD's budgetary grants being the nodal department dealing with Airport Infrastructure. Hence the following order.

**Government Order No. IDD 99 DIA 2005, Bangalore, Dated: 6th December, 2005**

After careful examination of proposal as explained in the preamble Government are pleased to sanction release of an amount of Rs.3.00 lakhs towards the event Aerodrome India 2005 Exhibition and Seminar-7-10 of December 2005. This expenditure will be met from the head of account 3451-Secretariat Economic Services-00-090-01-06. Infrastructure preliminary studies-125-Modernisation.

2. The CFO & CS, iDeCK is authorized to draw this amount on payees receipt after the counter signature of Under Secretary to Govt. IDD and remitt to PDA Trade Fair Account.

3. This order issues in accordance with and the powers delegated in GO.No.FD 1 TFP 2003 Dated: 12-06-2003.

By Order and in the name of the Governor of Karnataka,
**T.B. RENUKAPRASAD**
Under Secretary to Government,
Infrastructure Development Department.

PR-1716

## ಇಂಧನ ಸಚಿವಾಲಯ

**ವಿಷಯ :** ಮೆಸರ್ಸ್ ನಾರಾಯಣಪುರ ಪವರ್ ಕಂಪನಿ ಪ್ರೈವೇಟ್ ಲಿಮಿಟೆಡ್‌ಗೆ ಸೊಮನಮರಡಿ ಯುನಿಟ್-1 ಕಿರುಜಲ ವಿದ್ಯುತ್ ಯೋಜನೆಗೆ ಕಾಲಾವಕಾಶ ವಿಸ್ತರಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಡಿಇ 125 ಎನ್‌ಸಿಇ 96(13), ದಿನಾಂಕ:10.06.99.
2. ಸರ್ಕಾರಿ ಆದೇಶ ಸಂಖ್ಯೆ: ಡಿಇ 198 ಎನ್‌ಸಿಇ 2004 ದಿನಾಂಕ: 22.06.2004.
3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆ.ಆರ್.ಇಡಿ/ 06/ ಸೊಮನಮರಡಿ/ 2005/ 1417, ದಿನಾಂಕ: 02.08.2005.

**ಪ್ರಸ್ತಾವನೆ:**

ಓದಲಾದ (1)ರ ಆದೇಶದಲ್ಲಿ ಮೆಸರ್ಸ್ ನಾರಾಯಣಪುರ ಪವರ್ ಕಂಪನಿ ಪ್ರೈವೇಟ್ ಲಿಮಿಟೆಡ್ ಕಂಪೆನಿಗೆ 12 ಮೆಗಾ ವ್ಯಾಟ್ ಸಾಮರ್ಥ್ಯದ ಕಿರುಜಲ ವಿದ್ಯುತ್ ಯೋಜನೆಯನ್ನು ರಾಯಚೂರು ಜಿಲ್ಲೆಯ ನಾರಾಯಣಪುರ ಬಲದಂಡೆ ಕಾಲುವೆ (54.33 ಮತ್ತು 54.91 ಕೆಎಂ) ಯಲ್ಲಿ ಹಂಚಿಕೆ ಮಾಡಲಾಗಿದೆ.

ಓದಲಾದ (2)ರ ಆದೇಶದಲ್ಲಿ ಸದರಿ ಯೋಜನೆಯ ಯುನಿಟ್-1ಕ್ಕೆ ದಿನಾಂಕ:31.08.2005 ಮತ್ತು ಯುನಿಟ್-2ಕ್ಕೆ ದಿನಾಂಕ: 31.08.2008 ರವರೆಗೆ ಕಾಲಾವಕಾಶ ನೀಡಲಾಗಿದೆ.

ಓದಲಾದ (3)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು, ಮೆ: ನಾರಾಯಣಪುರ ಪವರ್ ಕಂಪನಿ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಸದರಿ ಯೋಜನೆಯ ಯುನಿಟ್-1ಕ್ಕೆ ಯಂತ್ರೋಪಕರಣಗಳ ಪೂರೈಕೆ ವಿಳಂಬವಾಗುವುದರಿಂದ ಕಾಲಾವಕಾಶವನ್ನು ದಿನಾಂಕ: 31.03.2006 ರವರೆಗೆ ವಿಸ್ತರಿಸಲು ಶಿಫಾರಸ್ಸು ಮಾಡಿರುವುದನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಎನ್ 249 ಎನ್‌ಸಿಇ 2005, ಬೆಂಗಳೂರು, ದಿನಾಂಕ: 20ನೇ ಅಕ್ಟೋಬರ್, 2005**

ಮೆಸರ್ಸ್ ನಾರಾಯಣಪುರ ಪವರ್ ಕಂಪನಿ ಪ್ರೈವೇಟ್ ಲಿಮಿಟೆಡ್ ನವರಿಗೆ ರಾಯಚೂರು ಜಿಲ್ಲೆಯ ನಾರಾಯಣಪುರ ಬಲದಂಡೆ ಕಾಲುವೆಯಲ್ಲಿ ಸೋಮನಮರಡಿ ಕಿರುಜಲ ವಿದ್ಯುತ್ ಯೋಜನೆಯ ಯುನಿಟ್-1 (6 ಮೆಗಾ ವ್ಯಾಟ್) ಕ್ಕೆ ಕಾಲಾವಕಾಶವನ್ನು ದಿನಾಂಕ: 31.03.2006ರವರೆಗೆ ವಿಸ್ತರಿಸಲಾಗಿದೆ.

ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

ಪಿ.ಆರ್.1717

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** ರಾಜ್ಯದಲ್ಲಿ ಆರು ಖಾಯಂ ಲೋಕ್ ಅದಾಲತ್‌ಗಳನ್ನು ಸ್ಥಾಪಿಸುವ ಕುರಿತು.

**ಓದಲಾಗಿದೆ :**
1. ಪತ್ರ ಸಂಖ್ಯೆ: ಎ-6001(3)/ 2001-ಎಡಿಎಂ-III (ಎಲ್‌ಎ) ದಿನಾಂಕ: 17.07.2002.
2. ಪತ್ರ ಸಂಖ್ಯೆ: ಕರಾಕಾಸೇಪ್ರಾ:42:admn.2002 ದಿನಾಂಕ: 19.09.2003.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ, ಮಾನ್ಯ ಕಾನೂನು ಮತ್ತು ನ್ಯಾಯ ಸಚಿವರು, ಭಾರತ ಸರ್ಕಾರ ಇವರು ರಾಜ್ಯದ ಮಾನ್ಯ ಮುಖ್ಯ ಮಂತ್ರಿಗಳಿಗೆ ಪತ್ರ ಬರೆಯುತ್ತಾ, ರಾಜ್ಯದಲ್ಲಿ ಖಾಯಂ ಲೋಕ್ ಅದಾಲತ್‌ಗಳನ್ನು ಸ್ಥಾಪಿಸಲು, ಕ್ರಮ ಕೈಗೊಳ್ಳುವಂತೆ ಕೋರಿದ್ದರು. ಈ ಸಂಬಂಧ ಕರ್ನಾಟಕ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರ ಇವರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಪ್ರಸ್ತಾವನೆ ಸಲ್ಲಿಸುತ್ತಾ, ರಾಜ್ಯದಲ್ಲಿ ಅಂತಹ ಆರು ಲೋಕ್ ಅದಾಲತ್‌ಗಳನ್ನು ಸ್ಥಾಪಿಸಲು ಶಿಫಾರಸ್ಸು ಮಾಡಿರುತ್ತಾರೆ.

ಈ ಕುರಿತಂತೆ, ದಿನಾಂಕ: 06.04.2005ರಂದು ಮಾನ್ಯ ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳು ಹಾಗೂ ಸಂಸದೀಯ ವ್ಯವಹಾರಗಳ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಚರ್ಚಿಸಿದ ನಂತರ ಅಂತಹ ಖಾಯಂ ಲೋಕ್ ಅದಾಲತ್‌ಗಳನ್ನು ಸ್ಥಾಪಿಸುವ ದಿಸೆಯಲ್ಲಿ ತೆಗೆದುಕೊಳ್ಳಬೇಕಾದ ಕ್ರಮಗಳನ್ನು ಸೂಚಿಸಲಾಗಿತ್ತು.

ನಂತರ ದಿನಾಂಕ: 10.06.2005 ಹಾಗೂ 11.06.2005 ರಂದು ಸಿಮ್ಲಾದಲ್ಲಿ ರಾಜ್ಯಗಳ ಕಾನೂನು ಸಚಿವರ ಹಾಗೂ ಕಾನೂನು ಕಾರ್ಯದರ್ಶಿಗಳ ಸಮ್ಮೇಳನ ನಡೆದಿದ್ದು, ಅದರಲ್ಲೂ ಸಹ ರಾಜ್ಯಗಳಲ್ಲಿ ಖಾಯಂ ಲೋಕ್ ಅದಾಲತ್ ಸ್ಥಾಪಿಸುವುದನ್ನು ಒತ್ತಿ ಹೇಳಲಾಗಿದೆ.

ಆ ಪ್ರಸ್ತಾವನೆ ಪರಿಶೀಲಿಸಿ, ಸರ್ಕಾರ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 145 ಎಲ್‌ಎಡಿ 2005, ಬೆಂಗಳೂರು, ದಿನಾಂಕ: 5ನೇ ಡಿಸೆಂಬರ್, 2005**

ಆ ಹಿನ್ನಲೆಯಲ್ಲಿ, ಬೆಂಗಳೂರು, ಮೈಸೂರು, ಮಂಗಳೂರು, ಧಾರವಾಡ, ಬೆಳಗಾಂ ಮತ್ತು ಗುಲ್ಬರ್ಗಾ ಇಲ್ಲಿ ಶಾಶ್ವತ ಲೋಕ್ ಅದಾಲತ್‌ಗಳನ್ನು ಸ್ಥಾಪಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಆ ಉದ್ದೇಶಕ್ಕಾಗಿ ಪ್ರತಿ ಲೋಕ್ ಅದಾಲತ್‌ಗಳಲ್ಲಿ ಈ ಕೆಳಗಿನಂತೆ ಹುದ್ದೆಗಳನ್ನು ಸೃಜಿಸಲು ಆದೇಶಿಸಿದೆ:

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ವೇತನ ಶ್ರೇಣಿ ರೂ. | ಹುದ್ದೆಗಳ ಸಂಖ್ಯೆ |
|---|---|---|---|
| 1. | ಅಧ್ಯಕ್ಷರು (ಜಿಲ್ಲಾ ನ್ಯಾಯಾಧೀಶರು: ಹೆಚ್ಚುವರಿ ಜಿಲ್ಲಾ ನ್ಯಾಯಾಧೀಶರು ಅಥವಾ ಜಿಲ್ಲಾ ನ್ಯಾಯಾಧೀಶರು: ಹೆಚ್ಚುವರಿ ನ್ಯಾಯಾಧೀಶರಾಗಿದ್ದವರು ಅಥವಾ ಅದಕ್ಕಿಂತ ಹೆಚ್ಚಿನ ಶ್ರೇಣಿಯ ಹುದ್ದೆಯಲ್ಲಿ ಕಾರ್ಯನಿರ್ವಹಿಸಿದ ನ್ಯಾಯಾಂಗ ವೃಂದ ಅಧಿಕಾರಿ) | | 01 |
| 2. | ಶಿರಸ್ತೆದಾರರು | 5200-9580 | 01 |
| 3. | ಪ್ರಥಮ ದರ್ಜೆ ಸಹಾಯಕರು (ಪಂಡಿಂಗ್) | 3850-7050 | 01 |
| 4. | ಪ್ರಥಮ ದರ್ಜೆ ಸಹಾಯಕರು | 3850-7050 | 01 |
| 5. | ಕಿರಿಯ ದರ್ಜೆ ಸಹಾಯಕರು | 3000-5450 | 02 |
| 6. | ಶೀಘ್ರಲಿಪಿಗಾರರು | 4150-7800 | 03 |

| | | | |
|---|---|---|---|
| 7. | ಬೆರಳಚ್ಚುಗಾರರು | 3000-5450 | 02 |
| 8. | ದಲಾಯತ್ | 2500-3850 | 03 |

ಆ ಸಂಬಂಧದ ಕಟ್ಟಡದ ಬಾಡಿಗೆ, ಪೀಠೋಪಕರಣ, ಸಿಬ್ಬಂದಿ ವೇತನ ಹಾಗೂ ಇತರೆ ಆವರ್ತ ಮತ್ತು ಅನಾವರ್ತಕ ವೆಚ್ಚಗಳನ್ನು 2005-06ನೇ ಸಾಲಿಗೆ ಪೂರಕ ಅಂದಾಜುಗಳಲ್ಲಿ (ಮೊದಲನೆ ಕಂತು) ಲೆಕ್ಕ ಶೀರ್ಷಿಕೆ 2014-00-105-0-11 (059- ಇತರೆ ಖರ್ಚು)ರ ಅಡಿ ಒದಗಿಸಿರುವ ರೂ.200.00 ಲಕ್ಷಗಳಲ್ಲಿ ಭರಿಸುವುದು.

ಇದಕ್ಕೆ ಆರ್ಥಿಕ ಇಲಾಖೆಯ ಸಹಮತಿಯನ್ನು ಟಿಪ್ಪಣಿ ಸಂಖ್ಯೆ: ಆಇ 665 ವೆಚ್ಚ-7:2005 ದಿನಾಂಕ: 10.10.2005ರಲ್ಲಿ ಪಡೆಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶಕುಂತಲಾ ಹೆಚ್.ಆರ್.**

ಪಿ.ಆರ್.1718

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-2),
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವಾಲಯ

**ವಿಷಯ :** "ನಮ್ಮ ಭೂಮಿ-ನಮ್ಮ ತೋಟ" ಯೋಜನೆಯ ಅನುಷ್ಠಾನಕ್ಕೆ ಅನುದಾನ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 5 ಸ್ವಉಕಾ 2005 ಬೆಂಗಳೂರು, ದಿನಾಂಕ: 28.09.2005.

2. ಈ ಇಲಾಖೆಯ ಪತ್ರದ ಸಮಸಂಖ್ಯೆ ದಿನಾಂಕ: 06.10.2005.

3. ಈ ಇಲಾಖೆಯ ಪತ್ರದ ಸಮಸಂಖ್ಯೆ: ದಿನಾಂಕ: 18.10.2005.

**ಪ್ರಸ್ತಾವನೆ:**

ರಾಜ್ಯದ ಗ್ರಾಮೀಣ ಪ್ರದೇಶಗಳಲ್ಲಿ ಸಮಸ್ತ ಭೂರಹಿತ ಕೃಷಿ ಕಾರ್ಮಿಕರ ಸಾಮಾಜಿಕ ಆರ್ಥಿಕ ವಿಕಾಸಕ್ಕೆ ಹಾಗೂ ಅವರ ಜೀವನ ಮಟ್ಟವನ್ನು ಸುಧಾರಿಸುವುದಕ್ಕಾಗಿ "ನಮ್ಮ ಭೂಮಿ-ನಮ್ಮ ತೋಟ" ಎಂಬ ಹೊಸ ಯೋಜನೆಯನ್ನು ಅನುಷ್ಠಾನಕ್ಕೆ ಜಾರಿಗೊಳಿಸಿದೆ. ಸದರಿ ಯೋಜನೆಯನ್ನು ಅನುಷ್ಠಾನಗೊಳಿಸಲು ಸಚಿವ ಸಂಪುಟವು ದಿನಾಂಕ: 15.09.2005ರಂದು ಅನುಮೋದನೆಯನ್ನು ನೀಡಿದೆ. ಪ್ರಸ್ತುತ ವರ್ಷದಲ್ಲಿ ಸದರಿ ಯೋಜನೆಯನ್ನು ಅನುಷ್ಠಾನಗೊಳಿಸಲು ಆರ್ಥಿಕ ಮತ್ತು ಭೌತಿಕ ಗುರಿಗಳನ್ನು ನಿಗದಿಪಡಿಸಿ ಹಂಚಿಕೆ ಮಾಡಲಾಗಿದೆ. ಭೌತಿಕ ಗುರಿಯನ್ನು ಹಂಚಿಕೆಯಂತೆ ಪೂರ್ಣವಾಗಿ ಪ್ರಚಲಿತ ವರ್ಷದಲ್ಲಿ ಸಾಧಿಸಲು ಜಿಲ್ಲಾ ಪಂಚಾಯಿತಿಗಳಿಗೆ ಆದೇಶಿಸಿದೆ. ಈ ಯೋಜನೆಯನ್ನು ಅನುಷ್ಠಾನಗೊಳಿಸಲು ಪ್ರಾಥಮಿಕ ಹಂತದಲ್ಲಿ ನಿಗದಿಪಡಿಸಿದ ಹಂಚಿಕೆಯ ಅನುದಾನದಲ್ಲಿ ಶೇಕಡ 50ರಷ್ಟು ಅನುದಾನವನ್ನು ಮೊದಲನೆ ಕಂತಾಗಿ ರಾಜ್ಯದ ಎಲ್ಲಾ ಜಿಲ್ಲಾ ಪಂಚಾಯಿತಿಗಳಿಗೆ ಬಿಡುಗಡೆ ಮಾಡಲು ಸರ್ಕಾರವು ತೀರ್ಮಾನಿಸಿದೆ. ಆದ್ದರಿಂದ ಈ ಕೆಳಗಿನಂತೆ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 5 ಸ್ವಉಕ 2005, ಬೆಂಗಳೂರು, ದಿನಾಂಕ: 1ನೇ ಡಿಸೆಂಬರ್, 2005**

1. ಪ್ರಸ್ತಾವನೆಯಲ್ಲಿ ವಿವರಿಸಿದಂತೆ "ನಮ್ಮ ಭೂಮಿ-ನಮ್ಮ ತೋಟ" ಎಂಬ ಯೋಜನೆಯನ್ನು ರಾಜ್ಯದ ಜಿಲ್ಲಾ ಪಂಚಾಯತ್‌ಗಳ ಗ್ರಾಮೀಣ ಪ್ರದೇಶಗಳಲ್ಲಿ ಅನುಷ್ಠಾನಗೊಳಿಸಲು ಜಿಲ್ಲಾ ಪಂಚಾಯತ್‌ಗಳ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳಿಗೆ, ಲಗತ್ತಿಸಿದ ಅನುಬಂಧದಲ್ಲಿ ನಮೂದಿಸಿದಂತೆ ಒಟ್ಟು ರೂ.10,0000000-00 ಗಳನ್ನು (ರೂ. ಹತ್ತು ಕೋಟಿಗಳು ಮಾತ್ರ) ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಬಿಡುಗಡೆ ಮಾಡಲು ಸರ್ಕಾರವು ಹರ್ಷಿಸುತ್ತದೆ.

(1) ಅತೀ ಹೆಚ್ಚು ಭೂರಹಿತ ಕೃಷಿ ಕಾರ್ಮಿಕರ ಕುಟುಂಬಗಳು ಇರುವಂತಹ ಗ್ರಾಮ ಪಂಚಾಯತ್‌ಗಳನ್ನು ಆದ್ಯತೆಯ ಮೇಲೆ ಆಯ್ಕೆ ಮಾಡುವುದು.

(2) ನಿಗದಿಪಡಿಸಿದ ಭೌತಿಕ ಮತ್ತು ಆರ್ಥಿಕ ಗುರಿಯಂತೆ ಯಾವುದೇ ಕಾರಣಕ್ಕೂ ಮೀರದಂತೆ, ಸಾಧನೆ ಮಾಡುವುದು.

(3) ಯೋಜನೆಯ ಅನುಷ್ಠಾನಕ್ಕೆ ಆಯ್ಕೆಯಾದ ಗ್ರಾಮ ಪಂಚಾಯತ್ ವ್ಯಾಪ್ತಿಯಲ್ಲಿ ಜಮೀನು ಖರೀದಿಗೆ ಸುಲಭವಾಗಿ ದೊರೆಯುವಂತಿರಬೇಕು.

(4) ಫಲವತ್ತಾದ ಜಮೀನಿನ ಲಭ್ಯತಾನುಸಾರ ಖರೀದಿ ಮೊತ್ತ ಪ್ರತಿ ಫಲಾನುಭವಿಗೆ ರೂ.6000-00ಗಳಿಗೆ ಮೀರದಂತೆ, ಕ್ರಮ ಜರುಗಿಸುವುದು.

(5) ಸದರಿ ಆಯ್ದ ಗ್ರಾಮ ಪಂಚಾಯತ್‌ಗಳಲ್ಲಿ ಗ್ರಾಮ ಪಂಚಾಯತ್ ಯೋಜನೆಗೆ ಹೊರಡಿಸಲಾದ ಸರ್ಕಾರಿ ಸುತ್ತೋಲೆ ಮತ್ತು ಮಾರ್ಗಸೂಚಿಗಳ ಪ್ರಕಾರ ಅನುಷ್ಠಾನಕ್ಕೆ ಕ್ರಮಕೈಗೊಳ್ಳುವುದು.

(6) ಜನವರಿ 2006 ಅಂತ್ಯದೊಳಗೆ, ಪ್ರಾಥಮಿಕ ಎಲ್ಲಾ ಪ್ರಕ್ರಿಯೆಗಳನ್ನು ಪೂರ್ಣಗೊಳಿಸಿ, (ಫಲಾನುಭವಿಗಳ ಆಯ್ಕೆ ಮತ್ತು ಭೂಮಿ ಖರೀದಿ ಸೇರಿದಂತೆ) ಫಲಾನುಭವಿಗಳಿಗೆ ಭೂಮಿಯನ್ನು ನೀಡುವ ಪ್ರಕ್ರಿಯೆಗೆ ಚಾಲನೆ ನೀಡುವುದು.

(7) ಪ್ರಸ್ತುತ ವರ್ಷದಲ್ಲಿ ಬಿಡುಗಡೆಯಾದ ಅನುದಾನವನ್ನು ಮಾರ್ಚ್ 2006ರೊಳಗೆ ಸಂಪೂರ್ಣವಾಗಿ ಯೋಜನೆಗೆ ಬಳಸಿ ಸರ್ಕಾರಕ್ಕೆ ವರದಿ ಸಲ್ಲಿಸುವುದು.

(8) ಮಾರ್ಗಸೂಚಿಯಲ್ಲಿ ತಿಳಿಸಿದ ರೀತ್ಯ ಮೂರು ಹಂತಗಳ ಪಂಚಾಯತ್‌ರಾಜ್ ಸಂಸ್ಥೆಗಳಿಗೆ ವಿವಿಧ ಸಮಿತಿಗಳನ್ನು ಸಕಾಲದಲ್ಲಿ ರಚಿಸಿ, ಯೋಜನೆಯ ಅನುಷ್ಠಾನಕ್ಕೆ ಮಾರ್ಗದರ್ಶನ ನೀಡುವಂತೆ ಹಾಗೂ ಅನುಷ್ಠಾನಾಧಿಕಾರಿಗಳಿಗೆ ನೆರವಾಗುವಂತೆ ಮತ್ತು ತಾಂತ್ರಿಕ ಸಲಹೆಗಳನ್ನು ನೀಡುವಂತೆ, ಕಾರ್ಯನಿರ್ವಹಣೆಗೆ ಬರಲು ಕ್ರಮ ಜರುಗಿಸುವುದು.

(9) ನಿಗದಿಪಡಿಸಿದ ಭೌತಿಕ ಗುರಿಗೆ ಅನುಗುಣವಾಗಿ ಆಯ್ದ ಗ್ರಾಮ ಪಂಚಾಯತ್‌ಗಳಲ್ಲಿ ಗ್ರಾಮಗಳು ಮತ್ತು ಫಲಾನುಭವಿಗಳ ಹೆಸರು ಮುಂತಾದ ವಿವರಗಳನ್ನು ಕೂಡಲೇ ಸರ್ಕಾರಕ್ಕೆ ಸಲ್ಲಿಸುವುದು.

(10) ಇಂತಹ ಸೌಲಭ್ಯವನ್ನು ಇತರೆ ಯೋಜನೆಗಳನ್ನು ಪಡೆದಿದ್ದಲ್ಲಿ, ಅಂತಹ ಫಲಾನುಭವಿಗಳಿಗೆ ಈ ಯೋಜನೆಯ ಪ್ರಯೋಜನವನ್ನು ನೀಡಬಾರದು. ಯಾವುದೇ ಸಂದರ್ಭದಲ್ಲಿ ಎರಡು ಅಥವಾ ಹೆಚ್ಚು ಕಾರ್ಯಕ್ರಮಗಳಲ್ಲಿ ಪ್ರಯೋಜನಗಳನ್ನು ಪಡೆಯದಂತೆ ನೋಡಿಕೊಳ್ಳುವುದು.

2. ಬಿಡುಗಡೆಯಾದ ಅನುದಾನವನ್ನು ಗ್ರಾಮ ಪಂಚಾಯತ್‌ಗಳಿಗೆ ಹದಿನೈದು ದಿನಗಳೊಳಗಾಗಿ ಜಿಲ್ಲಾ ಪಂಚಾಯತ್‌ಗಳ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು, ಬಿಡುಗಡೆ ಮಾಡುವುದು.

3. ಅನುದಾನದ ವೆಚ್ಚವನ್ನು ಈ ಕೆಳಕಂಡ ಲೆಕ್ಕ ಶೀರ್ಷಿಕೆಯಲ್ಲಿ ಭರಿಸತಕ್ಕದ್ದು.

2515- ಇತರೆ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮಗಳು-101- ಸಹಾಯ ಅನುದಾನ-0-23- ನಮ್ಮ ಹೊಲ ನಮ್ಮ ತೋಟ-059 ಇತರೆ ಖರ್ಚು (ಯೋಜನೆ) (2515-00-101-0-23-059)

ಬಿಡುಗಡೆಯಾದ ಅನುದಾನವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 7 ಜಡ್‌ಪಿಎ 2003 ದಿನಾಂಕ: 14.07.2005ರನ್ವಯ ಖಜಾನೆಯಿಂದ ಅನುದಾನ ಪಡೆದು ಯೋಜನೆಯ ರೂಪುರೇಶಗಳ ಕಂಡಿಕೆ 6.7ರ ಅನ್ವಯ ವೆಚ್ಚದ ನಿರ್ವಹಣೆಯನ್ನು ಮಾಡುವುದು.

4. ಯೋಜನೆಯನ್ನು ಗ್ರಾಮ ಪಂಚಾಯತ್‌ಗಳ ಮೂಲಕವೇ ಅನುಷ್ಠಾನಗೊಳಿಸಬೇಕು.

ಸರ್ಕಾರದ ಆದೇಶವನ್ನು ಈ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಗ್ರಾಅಪ/ 503/ ಪಿಬಿಎಸ್/ 2005/ ದಿನಾಂಕ:30.11.2005ರಲ್ಲಿ ಸಹಮತಿಸಿದಂತೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜಿ.ಬಿ. ಹಿರೇಮಣಿಯವರ್**
ನಿರ್ದೇಶಕರು (ಸ್ವಉಕಾ) ಹಾಗೂ
ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ.

## ANNEXURE

**Statement showing the release of first instalment of funds to Zilla Panchayats under "Namma Bhoomi Namma Thota" Scheme G.O. No.RDP:5:SEP:2005, Bangalore, Dated: 01-12-2005**

**(in Rs.)**

| Sl. No. | District | No. of Agricultural labourers | Approximate No. of landless agricultural labourers out of Col.3 | Physical target No. of landless labourers to be covered during 2005-06 | Allocation of funds | Funds being released now as 1st instalment |
|---|---|---|---|---|---|---|
| 1 | 2 | 3 | 4 | 5 | 6 | 7 |
| 1. | Bagalkot | 272817 | 21910 | 1402 | 8760000 | 4380000 |
| 2. | Bangalore (U) | 67102 | 5400 | 350 | 5850000 | 2925000 |
| 3. | Bangalore (R) | 182197 | 14625 | 940 | 2156000 | 1078000 |
| 4. | Belgaum | 587476 | 47170 | 3014 | 18870000 | 9435000 |
| 5. | Bellary | 361433 | 29018 | 1856 | 11609000 | 5804000 |
| 6. | Bidar | 209047 | 16784 | 1075 | 6714000 | 3357000 |
| 7. | Bijapur | 286739 | 23025 | 1472 | 9210000 | 4605000 |
| 8. | Chitradurga | 241444 | 19400 | 1250 | 6199000 | 3099000 |
| 9. | Chikmagalur | 109037 | 8760 | 561 | 3503000 | 1752000 |
| 10. | Chamarajnagar | 192978 | 15500 | 992 | 7755000 | 3877000 |
| 11. | D. Kannada | 42566 | 3425 | 218 | 1367000 | 683000 |
| 12. | Davanagere | 270703 | 21700 | 1390 | 8694000 | 4348000 |
| 13. | Dharwad | 186543 | 14980 | 954 | 5991000 | 2996000 |
| 14. | Gadag | 179595 | 14425 | 922 | 5768000 | 2884000 |
| 15. | Gulbarga | 539561 | 43319 | 2771 | 17330000 | 8665000 |
| 16. | Hassan | 126659 | 10170 | 653 | 4068000 | 2034000 |
| 17. | Haveri | 291275 | 23390 | 1498 | 9355000 | 4677000 |
| 18. | Kodagu | 11479 | 920 | 58 | 370000 | 185000 |
| 19. | Kolar | 337971 | 27140 | 1740 | 10855000 | 5428000 |
| 20. | Koppal | 234992 | 18861 | 1210 | 7548000 | 3774000 |
| 21. | Mandya | 206111 | 16550 | 1056 | 6620000 | 3310000 |
| 22. | Mysore | 250362 | 20100 | 1286 | 8041000 | 4020000 |
| 23. | Raichur | 328491 | 26369 | 1683 | 10551000 | 5276000 |

| 1 | 2 | 3 | 4 | 5 | 6 | 7 |
|---|---|---|---|---|---|---|
| 24. | Shimoga | 224124 | 18000 | 1152 | 7199000 | 3600000 |
| 25. | Tumkur | 313906 | 25225 | 1612 | 10082000 | 5041000 |
| 26. | U. Kannada | 84573 | 6784 | 435 | 2716000 | 1358000 |
| 27. | Udupi | 87761 | 7050 | 450 | 2819000 | 1409000 |
| | **Total** | **6226942** | **500000** | **32000** | **200000000** | **100000000** |

Director,
Self Employment Programmes
& E/O.Dy.Secretary to Government,
Rural Development & Panchayat Raj Department.

PR-1719

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಎಸ್. ಮರಿಯಪ್ಪ, ಚೀಫ್ ಜಡ್ಜ್, ಕೋರ್ಟ್ ಆಫ್ ಸ್ಮಾಲ್ ಕಾಸಸ್, ಬೆಂಗಳೂರು ಸಿಟಿ, ಇವರ ಸೇವೆಯನ್ನು 60 ವರ್ಷಗಳವರೆಗೆ ಮುಂದುವರೆಸುವ ಬಗ್ಗೆ.

**ಓದಲಾಗಿದೆ :** ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು, ಇವರ ಪತ್ರ ಸಂಖ್ಯೆ: ಜಿ.ಓ.ಬಿ. (1) 338: 2004, ದಿನಾಂಕ: 25.10.2005.

**ಪ್ರಸ್ತಾವನೆ:**

ಜಿಲ್ಲಾ ನ್ಯಾಯಾಧೀಶರ ಸೇವೆಯನ್ನು 58 ವರ್ಷ ನಂತರ ಮುಂದುವರೆಸುವ ಬಗ್ಗೆ ಉಚ್ಚ ನ್ಯಾಯಾಲಯದ ಸ್ಕ್ರೀನಿಂಗ್ ಸಮಿತಿ ಮೌಲ್ಯಮಾಪನ ಮಾಡಿ 58 ವರ್ಷ ನಂತರವೂ ಕರ್ತವ್ಯ ನಿರ್ವಹಿಸಲು ಅರ್ಹರೆಂದು ತೀರ್ಮಾನಿಸಿದಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ 95 (ಎ)ರ ಅನ್ವಯ 58 ವರ್ಷಗಳ ವಯಸ್ಸಿನ ನಂತರ 60 ವರ್ಷಗಳವರೆಗೆ ಮುಂದುವರೆಸಬಹುದಾಗಿದೆ. ಅದರಂತೆ ಶ್ರೀ ಎಸ್. ಮರಿಯಪ್ಪ, ಚೀಫ್ ಜಡ್ಜ್, ಕೋರ್ಟ್ ಆಫ್ ಸ್ಮಾಲ್ ಕಾಸಸ್, ಬೆಂಗಳೂರು ಸಿಟಿ, ಇವರ ಗೌಪ್ಯ ವರದಿ, ಇವರು ನಿರ್ವಹಿಸಿದ ಕಾರ್ಯದಕ್ಷತೆ, ಇವರ ಉಪಯುಕ್ತ ಸೇವಾ ಸಮರ್ಥತೆಗಳನ್ನು ಪರಿಗಣಿಸಿ ಇವರನ್ನು 58 ವರ್ಷಗಳ ನಂತರ 60 ವರ್ಷಗಳವರೆಗೆ ಸೇವೆಯಲ್ಲಿ ಮುಂದುವರೆಸಲು ಕರ್ನಾಟಕ ಉಚ್ಚ ನ್ಯಾಯಾಲಯವು ದಿನಾಂಕ: 19.10.2005ರಂದು ತೀರ್ಮಾನಿಸಿದ್ದು, ಮೇಲೆ ಓದಲಾದ ಪತ್ರ ದಿನಾಂಕ: 25.10.2005ರಲ್ಲಿ ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು, ಇವರು ದಿನಾಂಕ: 31.12.2005ರಂದು 58 ವರ್ಷಗಳ ವಯೋಮಿತಿಯನ್ನು ಪೂರೈಸಲಿರುವ ಶ್ರೀ ಎಸ್. ಮರಿಯಪ್ಪ, ಚೀಫ್ ಜಡ್ಜ್, ಕೋರ್ಟ್ ಆಫ್ ಸ್ಮಾಲ್ ಕಾಸಸ್, ಬೆಂಗಳೂರು ಸಿಟಿ, ಇವರನ್ನು 58 ವರ್ಷಗಳ ನಂತರ 60 ವರ್ಷದವರೆಗೆ ಸೇವೆಯಲ್ಲಿ ಮುಂದುವರೆಸಲು ಸರ್ಕಾರದ ಆದೇಶ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 126 ಸೇ ಉ ನ್ಯಾ 2005, ಬೆಂಗಳೂರು, ದಿನಾಂಕ: 7ನೇ ಡಿಸೆಂಬರ್, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಎಸ್. ಮರಿಯಪ್ಪ, ಚೀಫ್ ಜಡ್ಜ್, ಕೋರ್ಟ್ ಆಫ್ ಸ್ಮಾಲ್ ಕಾಸಸ್, ಬೆಂಗಳೂರು ಸಿಟಿ, ಇವರು ದಿನಾಂಕ: 31.12.2005ರಂದು 58 ವರ್ಷಗಳ ವಯೋಮಿತಿ ಪೂರೈಸಿದ ನಂತರ ಇವರನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 95 (ಎ) ರನ್ವಯ 60 ವರ್ಷಗಳ ವಯೋಮಿತಿ ವರೆಗೆ ಸೇವೆಯಲ್ಲಿ ಮುಂದುವರೆಸಲು ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ರಘುರಾಮ್ ಭಂಡಾರಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-3).

ಪಿ.ಆರ್.1720

**ವಿಷಯ :** ಶ್ರೀ ಎಸ್. ಮೂರ್ತಿ, ನಿವೃತ್ತ, ಕೆ.ಎ.ಎಸ್. ಅಧಿಕಾರಿ ಅವರ ವಿರುದ್ಧ ಇಲಾಖಾ ವಿಚಾರಣೆ ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ :**
1. ನೋಟೀಸ್ ಸಂಖ್ಯೆ: ಸಿಆಸುಇ 96 ಎಸ್‌ಇಎನ್ 04, ದಿನಾಂಕ: 08.11.2004.
2. ಶ್ರೀ ಎಸ್.ಮೂರ್ತಿ, ನಿವೃತ್ತ ಕೆಎಎಸ್ ಅಧಿಕಾರಿ ಅವರ ದಿನಾಂಕ: 10.01.2005ರ ಉತ್ತರ.

**ಪ್ರಸ್ತಾವನೆ:**

ಮೈಸೂರಿನ ಕರ್ನಾಟಕ ವಸ್ತು ಪ್ರದರ್ಶನ ಪ್ರಾಧಿಕಾರದಲ್ಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯಾಗಿ ಕಾರ್ಯ ನಿರ್ವಹಿಸುತ್ತಿದ್ದಾಗ ದಸರಾ ವಸ್ತು ಪ್ರದರ್ಶನ 2002ರ ಅಂಗವಾಗಿ ಲೀಡ್ ಪೆವಿಲಿಯನ್ ಕಾಮಗಾರಿಗೆ ಸರ್ಕಾರದ ಪೂರ್ವಾನುಮತಿಯನ್ನು ಪಡೆಯದೆ ಹಾಗೂ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಕಾಯ್ದೆ ಉಲ್ಲಂಘಿಸಿರುವ ಆರೋಪಕ್ಕಾಗಿ ಶ್ರೀ ಎಸ್.ಮೂರ್ತಿ, ನಿವೃತ್ತ ಕೆಎಎಸ್ ಅಧಿಕಾರಿ ಇವರಿಗೆ ಮೇಲೆ (1)ರಲ್ಲಿ ಓದಲಾದ ದಿನಾಂಕ: 08.11.2004ರ ನೋಟೀಸನ್ನು ಜಾರಿ ಮಾಡಿ ಸಮಜಾಯಿಷಿ ಕೇಳುವ ಮೂಲಕ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ನೋಟೀಸಿಗೆ ಮೇಲೆ (2)ರಲ್ಲಿ ಓದಲಾದ ದಿನಾಂಕ: 10.01.2005ರ ಉತ್ತರ ಸಲ್ಲಿಸಿದ ಅವರು ತಮ್ಮ ಮೇಲೆ ಹೊರಿಸಲಾದ ದೋಷಾರೋಪಣೆಯನ್ನು ನಿರಾಕರಿಸಿರುತ್ತಾರೆ. ಆದ್ದರಿಂದ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರಿಸಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 96 ಎಸ್ಇಎನ್ 2004, ಬೆಂಗಳೂರು, ದಿನಾಂಕ: 7ನೇ ಡಿಸೆಂಬರ್, 2005**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2)ರೊಡನೆ ಓದಿಕೊಂಡಂತೆ ಕರ್ನಾಟಕ ನಾಗರೀಕ ಸೇವಾ ನಿಯಮ 214ನೇ ನಿಯಮದಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಎಸ್.ಮೂರ್ತಿ, ಕೆಎಎಸ್ ಅಧಿಕಾರಿ ಅವರ ಮೇಲೆ ಹೇಳಿದ ಆರೋಪಗಳ ಬಗ್ಗೆ ವಿಚಾರಣೆ ಮಾಡಲು ಶ್ರೀ ಎಂ.ಎಸ್. ನಟರಾಜಮೂರ್ತಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ಈ ವಿಚಾರಣೆಗಾಗಿ ಅವರು ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 16 ಸೇಇವಿ 2005 ದಿನಾಂಕ: 23.08.2005ರಂತೆ ರೂ.6000/- ಗೌರವಧನ ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 45 ಸೇಇವಿ 2001, ದಿನಾಂಕ: 04.03.2002ರಂತೆ ರೂ.1000/- ವಾಹನ ಭತ್ಯೆಯನ್ನು ಪಡೆಯುತ್ತಾರೆ.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಸರ್ಕಾರದ ಅಧೀನ ಕಾರ್ಯದರ್ಶಿ, ವಾರ್ತಾ, ಪ್ರವಾಸೋದ್ಯಮ ಮತ್ತು ಯುವಜನ ಸೇವಾ ಇಲಾಖೆ (ಪ್ರವಾಸೋದ್ಯಮ) ಅವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶ, ಶೀಘ್ರಲಿಪಿಗಾರರ ಸೇವೆ ಇತ್ಯಾದಿಗಳನ್ನು ಒದಗಿಸಲು ವಾರ್ತಾ, ಪ್ರವಾಸೋದ್ಯಮ ಮತ್ತು ಯುವಜನ ಸೇವಾ ಇಲಾಖೆಯು ಕ್ರಮ ಕೈಗೊಳ್ಳುತ್ತದೆ. ವಿಚಾರಣೆಯನ್ನು 3 ತಿಂಗಳೊಳಗಾಗಿ ಮುಕ್ತಾಯಗೊಳಿಸಿ ವರದಿ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ರಘುರಾಮ್ ಭಂಡಾರಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-3).

ಪಿ.ಆರ್.1721

**ವಿಷಯ :** ಪಶುಸಂಗೋಪನೆ ಮತ್ತು ವಕ್ಫ್ ಸಚಿವರ ಆಪ್ತ ಶಾಖೆಯಲ್ಲಿನ ಆಪ್ತ ಸಹಾಯಕ ಹುದ್ದೆಯನ್ನು ಗ್ರೂಪ್ 'ಎ' ಹುದ್ದೆಗೆ ಉನ್ನತೀಕರಿಸುವ ಬಗ್ಗೆ.

**ಓದಲಾಗಿದೆ :** 1. ಟಿಪ್ಪಣಿ ಸಂಖ್ಯೆ: ಎಂಎಹೆಚ್/ ಎನ್/ 18/ 2004, ದಿನಾಂಕ: 15.06.2004.
2. ಟಿಪ್ಪಣಿ ಸಂಖ್ಯೆ: ಪ.ಸಂ.ವ.ಸ./13/ 925/ 2005, ದಿನಾಂಕ: 14.11.2005.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 175 ಸಆಸೇ 2004, ಬೆಂಗಳೂರು, ದಿನಾಂಕ: 7ನೇ ಡಿಸೆಂಬರ್, 2005**

ಕ್ರಮ ಸಂಖ್ಯೆ (1) ಮತ್ತು (2)ರಲ್ಲಿ ಓದಲಾಗಿರುವ ಟಿಪ್ಪಣಿಗಳಲ್ಲಿ ಪಶುಸಂಗೋಪನೆ ಮತ್ತು ವಕ್ಫ್ ಸಚಿವರ ಆಪ್ತ ಶಾಖೆಗೆ ಶ್ರೀ ಮಹಮ್ಮದ್ ಅಜಂ, ಅರ್ಥಶಾಸ್ತ್ರ ಉಪನ್ಯಾಸಕರು, ಕಾಲೇಜು ಶಿಕ್ಷಣ ನಿರ್ದೇಶನಾಲಯ, ಬೆಂಗಳೂರು ಇವರನ್ನು ನೇಮಿಸುವಂತೆ ಕೋರಲಾಗಿದೆ. ಪಶುಸಂಗೋಪನೆ ಮತ್ತು ವಕ್ಫ್ ಸಚಿವರ ಆಪ್ತ ಶಾಖೆಯಲ್ಲಿ ಸದರಿ ಅಧಿಕಾರಿಯವರನ್ನು ನೇಮಿಸಲು ಗ್ರೂಪ್ 'ಎ' ಹುದ್ದೆ ಖಾಲಿ ಇಲ್ಲದಿರುವುದರಿಂದ ಈ ದಿನಾಂಕ: 05.06.2004 ರಿಂದ ಜಾರಿಗೆ ಬರುವಂತೆ ಪಶುಸಂಗೋಪನೆ ಮತ್ತು ವಕ್ಫ್ ಸಚಿವರ ಪದಾವಧಿಯವರೆಗೆ ಅಥವಾ ಮುಂದಿನ ಆದೇಶದವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಸಚಿವರ ಆಪ್ತ ಶಾಖೆಯಲ್ಲಿ ಮಂಜೂರಾಗಿ ಖಾಲಿ ಇರುವ ಒಂದು ಗ್ರೂಪ್ 'ಸಿ' ಹುದ್ದೆಯನ್ನು ಗ್ರೂಪ್ 'ಎ' ಹುದ್ದೆಗೆ ಉನ್ನತೀಕರಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1554 ವೆಚ್ಚ-5/ 2004, ದಿನಾಂಕ: 28.09.2004ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಪಿ. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-2).

ಪಿ.ಆರ್.1722

**ತಿದ್ದುಪಡಿ**

**ಸಂಖ್ಯೆ: ಸಿಆಸುಇ 2 ಇಆಸು 2005, ಬೆಂಗಳೂರು, ದಿನಾಂಕ: 8ನೇ ಡಿಸೆಂಬರ್, 2005**

**ವಿಷಯ :** ಅತ್ಯುತ್ತಮ ಪ್ರಗತಿ ಸಾಧಿಸಿದ ನಾಗರೀಕ ಸೇವಾ ಸಿಬ್ಬಂದಿಗೆ ರಾಜ್ಯ ಪ್ರಶಸ್ತಿ ನೀಡುವ ಬಗ್ಗೆ ವಿಶೇಷ ಯೋಜನೆ.

**ಉಲ್ಲೇಖ :** ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 2 ಇಆಸು 2002, ದಿನಾಂಕ: 27.10.2005.

ಅತ್ಯುತ್ತಮ ಪ್ರಗತಿ ಸಾಧಿಸಿದ ನಾಗರೀಕ ಸೇವಾ ಸಿಬ್ಬಂದಿಗೆ ಪ್ರತಿವರ್ಷ ರಾಜ್ಯ ಪ್ರಶಸ್ತಿಯನ್ನು ನೀಡುವ ಬಗ್ಗೆ ಮಾರ್ಗಸೂಚಿಯನ್ನು ಮತ್ತು ಈ ಸಂಬಂಧವಾದ ವೆಚ್ಚಗಳನ್ನು ಲೆಕ್ಕ ಶೀರ್ಷಿಕೆ '2052-00-090-0-18-015 ಪೂರಕ ವೆಚ್ಚಗಳು ಅಡಿಯಲ್ಲಿ ಭರಿಸಲು ಉಲ್ಲೇಖಿತ ಸರ್ಕಾರದ ಆದೇಶಗಳಲ್ಲಿ ಸೂಚಿಸಲಾಗಿತ್ತು.

ಉಲ್ಲೇಖಿತ ಆದೇಶದಲ್ಲಿ ತಿಳಿಸಲಾದ ಲೆಕ್ಕಶೀರ್ಷಿಕೆ ಬದಲಿಗೆ ಈ ಸಂಬಂಧವಾದ ವೆಚ್ಚಗಳನ್ನು ಲೆಕ್ಕಶೀರ್ಷಿಕೆ "2052-00-090-0-18-051 ಸಾಮಾನ್ಯ ವೆಚ್ಚಗಳು" ಎಂದು ತಿದ್ದುಪಡಿ ಮಾಡಲಾಗಿದೆ.

ಈ ತಿದ್ದುಪಡಿಯನ್ನು ಆರ್ಥಿಕ ಇಲಾಖೆಯ ದಿನಾಂಕ: 30.11.2005ರ ಅನಧಿಕೃತ ಟಿಪ್ಪಣಿ ಸಂಖ್ಯೆ: 2206 ವೆಚ್ಚ-5 2005ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಕೆ. ಅನಸೂಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ತರಬೇತಿ).

ಪಿ.ಆರ್.1723

## ನಗರಾಭಿವೃದ್ಧಿ ಸಚಿವಾಲಯ

## ತಿದ್ದುಪಡಿ

### ಸಂಖ್ಯೆ: ನಅಇ 219 ಬೆಮಪ್ರಾ 2004, ಬೆಂಗಳೂರು, ದಿನಾಂಕ: 8ನೇ ಡಿಸೆಂಬರ್, 2005

ಬಾಗಲಕೋಟೆ ಜಿಲ್ಲೆ ಇಳಕಲೆ ಸ್ಥಳೀಯ ಯೋಜನಾ ಪ್ರದೇಶಕ್ಕೆ ತಯಾರಿಸಲಾಗಿರುವ ವ್ಯಾಪಕಾಭಿವೃದ್ಧಿ ಯೋಜನೆಗೆ ಅಂತಿಮ ಅನುಮೋದನೆಯನ್ನು ನೀಡಿ ಹೊರಡಿಸಿರುವ ಆದೇಶ ಸಂಖ್ಯೆ: ನಅಇ 219 ಬೆಮಪ್ರಾ 2004 ದಿನಾಂಕ: 15.02.2005ರಂದು ಹೊರಡಿಸಿರುವ ಆದೇಶದಲ್ಲಿ "ಪರಿಷ್ಕೃತ ವ್ಯಾಪಾಕಾಭಿವೃದ್ಧಿ ಯೋಜನೆ" ಎಂಬುದಕ್ಕೆ ಬದಲಾಗಿ "ಅಂತಿಮ ಸ್ಥೂಲಾಭಿವೃದ್ಧಿ ಯೋಜನೆ" ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ವೈ. ಸಾಗರ**

ಪಿ.ಆರ್.1724 ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

## ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ

**ವಿಷಯ :** ರಾಜ್ಯದ ಅಕಾಡೆಮಿಗಳಿಗೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಸಂಕ ಇ 92 ಕರಅ 2005, ದಿನಾಂಕ: 09.08.2005.
2. ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರ ಪತ್ರ ಸಂಖ್ಯೆ: ಕಸನಿ:3:ರಾಅ:ಅನುದಾನ: 2005-06 ದಿನಾಂಕ: 22.09.2005.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ರಾಜ್ಯದ 10 ಅಕಾಡೆಮಿಗಳಿಗೆ ತಲಾ ರೂ.5.00 ಲಕ್ಷಗಳಂತೆ ರೂ.50.00 ಲಕ್ಷಗಳನ್ನು ಯೋಜನೆ ಅಡಿಯಲ್ಲಿ ಬಿಡುಗಡೆಗೊಳಿಸಲಾಗಿತ್ತು. ಓದಲಾದ (2)ರ ಪತ್ರದಲ್ಲಿ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶಕರು 2ನೇ ಕಂತಿನ ಹಣವನ್ನು ಬಿಡುಗಡೆಗೊಳಿಸಲು ಕೋರಿ ಪ್ರಸ್ತಾವನೆ ಸಲ್ಲಿಸಿರುವರು. ಸದರಿ ಪ್ರಸ್ತಾವನೆಯನ್ನು ಸರ್ಕಾರ ಪರಿಶೀಲಿಸಿ ಈ ಕೆಳಗಿನಂತೆ ಆದೇಶ ನೀಡಿದೆ.

### ಸರ್ಕಾರದ ಆದೇಶ ಸಂಖ್ಯೆ: ಸಂಕಇ 156 ಕರಅ 2005, ಬೆಂಗಳೂರು, ದಿನಾಂಕ: 7ನೇ ಡಿಸೆಂಬರ್, 2005

ಪ್ರಸಕ್ತ ಸಾಲಿನಲ್ಲಿ ಈ ಕೆಳಕಂಡ ರಾಜ್ಯದ 10 ಅಕಾಡೆಮಿಗಳಿಗೆ ಅವುಗಳ ಮುಂದೆ ನಮೂದಿಸಿರುವಂತೆ ಒಟ್ಟು ರೂ. 47.40 ಲಕ್ಷಗಳ (ನಲವತ್ತೇಳು ಲಕ್ಷದ ನಲವತ್ತು ಸಾವಿರ ರೂಪಾಯಿಗಳು ಮಾತ್ರ) 2ನೇ ಕಂತಿನ ಅನುದಾನವನ್ನು ಅಕಾಡೆಮಿಗಳಿಗೆ ಬಿಡುಗಡೆ ಮಾಡುವ ಸಲುವಾಗಿ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು ರವರಿಗೆ ಬಿಡುಗಡೆಗೊಳಿಸಲಾಗಿದೆ.

| | | |
|---|---|---|
| 1. | ಕರ್ನಾಟಕ ಉರ್ದು ಅಕಾಡೆಮಿ | ರೂ.4.74 ಲಕ್ಷ |
| 2. | ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿ | ರೂ.4.74 ಲಕ್ಷ |
| 3. | ಕರ್ನಾಟಕ ನಾಟಕ ಅಕಾಡೆಮಿ | ರೂ.4.74 ಲಕ್ಷ |
| 4. | ಕರ್ನಾಟಕ ಲಲಿತಕಲಾ ಅಕಾಡೆಮಿ | ರೂ.4.74 ಲಕ್ಷ |
| 5. | ಕರ್ನಾಟಕ ಜಾನಪದ ಯಕ್ಷಗಾನ ಅಕಾಡೆಮಿ | ರೂ.4.74 ಲಕ್ಷ |
| 6. | ಕರ್ನಾಟಕ ಸಾಹಿತ್ಯ ಅಕಾಡೆಮಿ | ರೂ.4.74 ಲಕ್ಷ |
| 7. | ಕರ್ನಾಟಕ ತುಳು ಸಾಹಿತ್ಯ ಅಕಾಡೆಮಿ | ರೂ.4.74 ಲಕ್ಷ |
| 8. | ಕರ್ನಾಟಕ ಶಿಲ್ಪಕಲಾ ಅಕಾಡೆಮಿ | ರೂ.4.74 ಲಕ್ಷ |
| 9. | ಕರ್ನಾಟಕ ಕೊಂಕಣಿ ಸಾಹಿತ್ಯ ಅಕಾಡೆಮಿ | ರೂ.4.74 ಲಕ್ಷ |
| 10. | ಕರ್ನಾಟಕ ಕೊಡವ ಸಾಹಿತ್ಯ ಅಕಾಡೆಮಿ | ರೂ.4.74 ಲಕ್ಷ |

ಈ ವೆಚ್ಚವನ್ನು 2005-06ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2205-00-102-4-01 (ಯೋಜನೆ) ಉಪಶೀರ್ಷಿಕೆ 101 ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆದೇಶ ಸಂಖ್ಯೆ: ಎಫ್.ಡಿ.1 ಟಿ.ಎಫ್.ಪಿ.96 ದಿನಾಂಕ: 10.07.1996ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಫ್.ಆರ್. ಸಂಬರಗಿ**

ಪಿ.ಆರ್.1725 ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

## ತಿದ್ದುಪಡಿ

### ಸಂಖ್ಯೆ: ಆಕುಕ 696 ಹೆಚ್ಎಸ್ಹೆಚ್ 2004, ಬೆಂಗಳೂರು, ದಿನಾಂಕ:30ನೇ ನವೆಂಬರ್, 2005

ಸರ್ಕಾರದ ಅಧಿಸೂಚನೆ ಸಂಖ್ಯೆ: ಆಕುಕ 673 ಹೆಚ್ಎಸ್ಹೆಚ್ 1996 ದಿನಾಂಕ: 24.07.1997ರ ಕ್ರಮ ಸಂಖ್ಯೆ: 121ರ ಕಲಂ 2ರಲ್ಲಿ "ಡಾ: ಎಸ್.ಬಿ. ಬಸವರಾಜಪ್ಪ" ಎಂಬುದರ ಬದಲಾಗಿ "ಡಾ: ಹೆಚ್.ಜೆ. ಬಸವರಾಜಪ್ಪ" ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ನಾರಾಯಣ ಗೌಡ**

ಪಿ.ಆರ್.1726 ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು-1).

## ಸಹಕಾರ ಸಚಿವಾಲಯ

**ವಿಷಯ :** ಮುಂಡಗೋಡ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಮಂಜೂರಾದ ತಾತ್ಕಾಲಿಕ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಸಿಎಂಡಬ್ಲ್ಯೂ 35 ಎಂಆರ್‌ಇ 96, ದಿನಾಂಕ: 22.05.1997.
2. ಸರ್ಕಾರದ ಆದೇಶ ಸಂಖ್ಯೆ:ಸಇ/ 206/ ಎಂಆರ್‌ಇ/ 01, ದಿನಾಂಕ: 19.09.2001.
3. ಸರ್ಕಾರದ ಆದೇಶ ಸಂಖ್ಯೆ: ಸಇ /344/ ಎಂಆರ್‌ಇ/ 02, ದಿನಾಂಕ: 30.01.2003.
4. ಸರ್ಕಾರದ ಆದೇಶ ಸಂಖ್ಯೆ: ಸಇ/ 97/ ಮಾಇಸೇ/ 2003, ದಿನಾಂಕ:30.07.2003
5. ಸರ್ಕಾರದ ಆದೇಶ ಸಂಖ್ಯೆ: ಸಇ/ 67/ ಮಾಇಸೇ/ 04, ದಿನಾಂಕ: 15.10.2004.
6. ಆಯುಕ್ತರು, ಕೃಷಿ ಮಾರಾಟ ಇಲಾಖೆ, ಬೆಂಗಳೂರುರವರ ಪತ್ರ ಸಂಖ್ಯೆ: ಕೃಮಾಇ/ 85/ ಸಿಬ್ಬಂದಿ-1(ಸಿ) 2004, ದಿನಾಂಕ: 06.04.2005.

**ಪ್ರಸ್ತಾವನೆ:**

ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ದಿನಾಂಕ: 22.05.1997ರ ಆದೇಶಾನುಸಾರ ಮುಂಡಗೋಡ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ 2 ವರ್ಷಗಳ ಅವಧಿಗೆ ಮಾತ್ರ ಈ ಕೆಳಕಂಡ ಹುದ್ದೆಗಳನ್ನು ಸೃಷ್ಟಿಸಿ ಸರ್ಕಾರದ ಮಂಜೂರಾತಿ ನೀಡಲಾಗಿತ್ತು.

| ಕ್ರಮ ಸಂಖ್ಯೆ | ಹುದ್ದೆಗಳ ಪದನಾಮ | ಪರಿಷ್ಕೃತ ವೇತನ ಶ್ರೇಣಿ | ಹುದ್ದೆಗಳ ಸಂಖ್ಯೆ |
|---|---|---|---|
| 1. | ಕಾರ್ಯದರ್ಶಿ ದರ್ಜೆ-4 | 5575-10620 | 01 |
| 2. | ಲೆಕ್ಕಿಗ ದರ್ಜೆ-2 | 3850-7050 | 01 |
| 3. | ಮಾರುಕಟ್ಟೆ ಸಹಾಯಕ | 3000-5450 | 03 |
| 4. | ದ್ವಿತೀಯ ದರ್ಜೆ ಸಹಾಯಕ | 3000-5450 | 01 |
| 5. | “ಡಿ” ದರ್ಜೆ ನೌಕರರು | 2500-3850 | 02 |
| | **ಒಟ್ಟು** | | **08** |

ತದನಂತರ, ಕ್ರಮಾಂಕ (2) ರಿಂದ (5)ರಲ್ಲಿ ಓದಲಾದ ವಿವಿಧ ಆದೇಶಗಳ ಮೂಲಕ ಮೇಲ್ಕಂಡ ಹುದ್ದೆಗಳ ಅವಧಿಯನ್ನು ಕಾಲಕಾಲಕ್ಕೆ ವಿಸ್ತರಿಸಲಾಗಿತ್ತು. ಸದರಿ ಹುದ್ದೆಗಳ ಪ್ರಸ್ತುತ ಅವಧಿಯು ದಿನಾಂಕ: 22.05.2005ರಂದು ಮುಕ್ತಾಯಗೊಳ್ಳುವ ಪ್ರಯುಕ್ತ ಅವುಗಳನ್ನು ಸದರಿ ದಿನಾಂಕದಿಂದ ಅನ್ವಯಿಸುವಂತೆ ಖಾಯಂಗೊಳಿಸಲು ಅಥವಾ ಖಾಯಂಗೊಳಿಸುವ ಪ್ರಕ್ರಿಯೆ ವಿಳಂಬವಾದಲ್ಲಿ ಪುನಃ ಅವುಗಳನ್ನು 2 ವರ್ಷಗಳ ಅವಧಿಗೆ ಮುಂದುವರಿಸಲು ಮೇಲೆ ಕ್ರಮಾಂಕ (6)ರಲ್ಲಿ ಓದಲಾದ ದಿನಾಂಕ: 06.04.2005ರ ಪತ್ರದಲ್ಲಿ ಆಯುಕ್ತರು, ಕೃಷಿ ಮಾರಾಟ ಇಲಾಖೆ ಇವರು ಪ್ರಸ್ತಾಪಿಸಿರುತ್ತಾರೆ.

ಮೇಲ್ಕಂಡ ಪ್ರಸ್ತಾವನೆಯನ್ನು ನಿಯಮಗಳಾನುಸಾರ ಪರಿಶೀಲಿಸಿದ ಸರ್ಕಾರವು ಸದರಿ ಹುದ್ದೆಗಳನ್ನು ದಿನಾಂಕ: 23.05.2005 ರಿಂದ 31.05.2006 ರವರೆವಿಗೆ ಮುಂದುವರಿಸುವುದು ಸೂಕ್ತವೆಂದು ಪರಿಗಣಿಸಿದೆ. ಆದುದರಿಂದ, ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಇ 193 ಮಾಇಸೇ 2005, ಬೆಂಗಳೂರು, ದಿನಾಂಕ: 6ನೇ ಡಿಸೆಂಬರ್, 2005**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ, ಮುಂಡಗೋಡ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಮಂಜೂರಾದ ಈ ಕೆಳಕಂಡ ಹುದ್ದೆಗಳನ್ನು ತಾತ್ಕಾಲಿಕವಾಗಿ ದಿನಾಂಕ: 23.05.2005 ರಿಂದ 31.05.2006 ರವರೆವಿಗೆ ಮುಂದುವರಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

| ಕ್ರಮ ಸಂಖ್ಯೆ | ಹುದ್ದೆಗಳ ಪದನಾಮ | ಪರಿಷ್ಕೃತ ವೇತನ ಶ್ರೇಣಿ | ಹುದ್ದೆಗಳ ಸಂಖ್ಯೆ |
|---|---|---|---|
| 1. | ಕಾರ್ಯದರ್ಶಿ ದರ್ಜೆ-4 | 5575-10620 | 01 |
| 2. | ಲೆಕ್ಕಿಗ ದರ್ಜೆ-2 | 3850-7050 | 01 |
| 3. | ಮಾರುಕಟ್ಟೆ ಸಹಾಯಕ | 3000-5450 | 03 |
| 4. | ದ್ವಿತೀಯ ದರ್ಜೆ ಸಹಾಯಕ | 3000-5450 | 01 |
| 5. | “ಡಿ” ದರ್ಜೆ ನೌಕರರು | 2500-3850 | 02 |
| | **ಒಟ್ಟು** | | **08** |

ಈ ಬಗ್ಗೆ ತಗಲುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ ಸಂಖ್ಯೆ:“3475-ಇತರೆ ಸಾಮಾನ್ಯ ಆರ್ಥಿಕ ಸೇವೆ-107-ಮಾರುಕಟ್ಟೆಗಳ ಕ್ರಮಪಡಿಸುವಿಕೆ-02-ಮಾರುಕಟ್ಟೆ ಸಮಿತಿಗಳು (ಯೋಜನೇತರ)”ರ ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಅನಧಿಕೃತ ಟಿಪ್ಪಣಿ ಸಂಖ್ಯೆ:ಸಇ 392 ಅಂಆಸ (ಎ) 05 ದಿನಾಂಕ: 27.10.2005ರಲ್ಲಿನ ಆಂತರಿಕ ಆರ್ಥಿಕ ಸಲಹೆಗಾರರು, ಅಪಜಿ ಮತ್ತು ಸಹಕಾರ ಇಲಾಖೆ ಇವರ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಾಯ್ಸ್ ಸುರೇಂದ್ರ**

ಸರ್ಕಾರದ ಜಂಟಿ ಕಾರ್ಯದರ್ಶಿ,

ಸಹಕಾರ ಇಲಾಖೆ.

ಪಿ.ಆರ್.1727

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ :** ತುಮಕೂರು ಜಿಲ್ಲೆ ಗುಬ್ಬಿ ಕುಶಲಕರ್ಮಿ ತರಬೇತಿ ಕೇಂದ್ರದ ಕಟ್ಟಡವನ್ನು ಕರ್ನಾಟಕ ರಾಜ್ಯ ತೆಂಗಿನ ನಾರಿನ ಅಭಿವೃದ್ಧಿ ನಿಗಮಕ್ಕೆ ವರ್ಗಾಯಿಸುವ ಬಗ್ಗೆ.

**ಓದಲಾಗಿದೆ :** ಕೈಗಾರಿಕಾಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರ ಪತ್ರ ಸಂಖ್ಯೆ: ಜಿಕೈಕೇ: ಕುಕತಸಂ-ತು: ವರ್ಗಾವಣೆ: ಅಧೀ: 2005-06, ದಿನಾಂಕ: 17.11.2005.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಕೈಗಾರಿಕಾಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರ ಪತ್ರದಲ್ಲಿ ತುಮಕೂರು ಜಿಲ್ಲೆ ಗುಬ್ಬಿ ಕುಶಲಕರ್ಮಿ ತರಬೇತಿ ಕೇಂದ್ರದ ಆವರಣದಲ್ಲಿ ಕರ್ನಾಟಕ ರಾಜ್ಯ ತೆಂಗಿನ ನಾರಿನ ಅಭಿವೃದ್ಧಿ ನಿಗಮದ ವತಿಯಿಂದ ನಾರಿನ ಉತ್ಪನ್ನಗಳನ್ನು ತಯಾರಿಸುತ್ತಿದ್ದು ನಿಗಮದ ಕಾರ್ಯಚಟುವಟಿಕೆಗಳನ್ನು ಮತ್ತಷ್ಟು ವಿಸ್ತರಿಸಿಕೊಂಡು ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ಗ್ರಾಮೀಣ ಕಸುಬುದಾರರಿಗೆ ಉದ್ಯೋಗಾವಕಾಶ ಕಲ್ಪಿಸುವ ಉದ್ದೇಶದಿಂದ ಹಾಲಿ ಖಾಲಿಯಿರುವ ಕುಶಲಕರ್ಮಿ ತರಬೇತಿ ಸಂಸ್ಥೆಯ ಕಟ್ಟಡವನ್ನು ಕರ್ನಾಟಕ ರಾಜ್ಯ ತೆಂಗಿನ ನಾರಿನ ಅಭಿವೃದ್ಧಿ ನಿಗಮ ನಿಯಮಿತಕ್ಕೆ ಹಸ್ತಾಂತರಿಸುವಂತೆ ನಿಗಮದ ವ್ಯವಸ್ಥಾಪಕ ನಿರ್ದೇಶಕರು ಕೋರಿರುವ ಹಿನ್ನೆಲೆಯಲ್ಲಿ ಹಾಲಿ ಖಾಲಿಯಿರುವ ಕುಶಲಕರ್ಮಿ ತರಬೇತಿ ಸಂಸ್ಥೆ, ಗುಬ್ಬಿ, ಈ ಕಟ್ಟಡವನ್ನು ಕರ್ನಾಟಕ ರಾಜ್ಯ ತೆಂಗಿನ ನಾರಿನ ಅಭಿವೃದ್ಧಿ ನಿಗಮ ನಿಯಮಿತಕ್ಕೆ ಹಸ್ತಾಂತರಿಸಲು ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಸರ್ಕಾರ ಪರಿಶೀಲಿಸಿದೆ ಹಾಗೂ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಾಕೈ 21 ಕೈತವಿ 2005, ಬೆಂಗಳೂರು, ದಿನಾಂಕ: 13ನೇ ಡಿಸೆಂಬರ್, 2005**

ಮೇಲೆ ವಿವರಿಸಿದ ಹಿನ್ನೆಲೆಯಲ್ಲಿ, ತುಮಕೂರು ಜಿಲ್ಲೆಯ ಗುಬ್ಬಿಯ ಕುಶಲಕರ್ಮಿ ತರಬೇತಿ ಸಂಸ್ಥೆಯ ಹಾಲಿ ಖಾಲಿಯಿರುವ ಕಟ್ಟಡವನ್ನು ತೆಂಗಿನ ನಾರಿನ ಅಭಿವೃದ್ಧಿ ನಿಗಮದ ಕಾರ್ಯಚಟುವಟಿಕೆಗಳನ್ನು ವಿಸ್ತರಿಸುವ ಸಲುವಾಗಿ ಕರ್ನಾಟಕ ರಾಜ್ಯ ತೆಂಗಿನ ನಾರಿನ ಅಭಿವೃದ್ಧಿ ನಿಗಮ ನಿಯಮಿತಕ್ಕೆ ಹಸ್ತಾಂತರಿಸಲು ಸರ್ಕಾರದ ಅನುಮತಿ ನೀಡಿದೆ.

"ಕುಶಲಕರ್ಮಿ ತರಬೇತಿ ಸಂಸ್ಥೆ ಗೇಟಿನ ಎಡಭಾಗದಲ್ಲಿ ಕೈಗಾರಿಕಾ ವಿಸ್ತರಣಾಧಿಕಾರಿಯವರ ಕಾರ್ಯಾಲಯವಿದ್ದು, ಸದರಿ ಕಾರ್ಯಾಲಯದ ಕಟ್ಟಡಕ್ಕೆ ಹಾಗೂ ಸದರಿ ಕಾರ್ಯಾಲಯಕ್ಕೆ ಹೋಗಿ ಬರಲು ದಾರಿ ಬಿಟ್ಟು ಉಳಿದ ಎಲ್ಲಾ ಕಟ್ಟಡವನ್ನು ಕರ್ನಾಟಕ ರಾಜ್ಯ ತೆರಿಗೆ ನಾರಿನ ಅಭಿವೃದ್ಧಿ ನಿಗಮ ನಿಯಮಿತ ಸಂಸ್ಥೆಗೆ ವಹಿಸಿಕೊಡಲು ಕೈಗಾರಿಕಾಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರು ಕ್ರಮ ತೆಗೆದುಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪದ್ಮಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಸೇವೆಗಳು).

ಪಿ.ಆರ್.1728

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ :** ಶ್ರೀ ಎಫ್.ಬಿ. ನಂದಗಡ, ಪುರಸಭೆ ತಹಶೀಲ್ದಾರರು, ಜಿಲ್ಲಾ ನಗರಾಭಿವೃದ್ಧಿ ಕೋಶ, ಜಿಲ್ಲಾಧಿಕಾರಿಗಳ ಕಾರ್ಯಾಲಯ, ಧಾರವಾಡ ಇವರ ವಿರುದ್ಧ ಶಿಸ್ತು ಕ್ರಮವನ್ನು ಕೈಬಿಡುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಕಾರಣ ಕೇಳುವ ನೋಟಿಸು ಸಂಖ್ಯೆ: ಆನಾಸ 65 ಆಇಸೇ 2002, ದಿನಾಂಕ: 30.05.2005.
2. ಆಪಾದಿತ ಅಧಿಕಾರಿಯ ರಕ್ಷಣಾ ಹೇಳಿಕೆ ದಿನಾಂಕ: 13.06.2005.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಕಾರಣ ಕೇಳುವ ನೋಟಿಸ್‌ನಲ್ಲಿ ಶ್ರೀ ಎಫ್.ಬಿ. ನಂದಗಡ ಇವರು ಬಾಗಲಕೋಟೆ ಜಿಲ್ಲೆಯ ಬಾದಾಮಿ ತಾಲ್ಲೂಕಿನಲ್ಲಿ ತಹಶೀಲ್ದಾರರಾಗಿ ಕಾರ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಸರ್ಕಾರದ ಆದೇಶ ಸಂಖ್ಯೆ: ಆನಾಸ 44 ಆಇಸೇ 2001, ದಿನಾಂಕ: 19.01.2002ರಲ್ಲಿ ಶ್ರೀ ರಂಗಸ್ವಾಮಯ್ಯ, ಆಹಾರ ಶಿರಸ್ತೇದಾರರು, ತಾಲ್ಲೂಕು ಕಛೇರಿ, ಬಾದಾಮಿ, ಬಾಗಲಕೋಟೆ ಜಿಲ್ಲೆ ಇಲ್ಲಿಗೆ ವರ್ಗಾಯಿಸಲಾಗಿದ್ದು, ಸದರಿ ನೌಕರರನ್ನು ಕರ್ತವ್ಯಕ್ಕೆ ಹಾಜರುಪಡಿಸಿಕೊಳ್ಳದೇ ಸರ್ಕಾರದ ಆದೇಶ, ಉಪನಿರ್ದೇಶಕರು, ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆ, ಬಾಗಲಕೋಟೆ ಹಾಗೂ ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆಯ ಆಯುಕ್ತರ ಆದೇಶಗಳನ್ನು ಉಲ್ಲಂಘಿಸಿರುವ ಹಿನ್ನೆಲೆಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲು ದೋಷಾರೋಪಣಾ ಪಟ್ಟಿಯನ್ನು ಜಾರಿ ಮಾಡಿದ್ದು, ಲಿಖಿತ ಹೇಳಿಕೆಯನ್ನು ನೀಡಲು ಸೂಚಿಸಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ಆಪಾದಿತ ಅಧಿಕಾರಿಯು ಲಿಖಿತ ಹೇಳಿಕೆಯಲ್ಲಿ ಶ್ರೀ ರಂಗಸ್ವಾಮಯ್ಯ, ಆಹಾರ ಶಿರಸ್ತೇದಾರ್ ಇವರು ಕರ್ತವ್ಯಕ್ಕೆ ಹಾಜರಾಗದೇ ಇರುವುದಕ್ಕೆ ಅವರೇ ಹೊಣೆಗಾರರಾಗಿದ್ದು, ಅಂದು ತಾವು ಕೇಂದ್ರಸ್ಥಳದಲ್ಲಿ ಇರಲಿಲ್ಲವೆಂದು ತಿಳಿಸಿ ಆರೋಪಗಳನ್ನು ನಿರಾಕರಿಸಿರುತ್ತಾರೆ.

ಬೆಳಗಾವಿ ವಿಭಾಗಾಧಿಕಾರಿಗಳು ತಮ್ಮ ಆದೇಶ ಸಂಖ್ಯೆ: ಆರ್‌ಬಿ. ಇಎಸ್‌ಟಿ. 2. ಸಿಆರ್. 109 2000-01, ದಿನಾಂಕ: 19.01.2002ರಲ್ಲಿ ಶ್ರೀ ಡಿ.ಎನ್. ಪಾಟೀಲ, ಪ್ರಥಮ ದರ್ಜೆ ಆಹಾರ ನಿರೀಕ್ಷಕರು ಇವರಿಗೆ ಬಡ್ತಿ ನೀಡಿ ಶಿರಸ್ತೇದಾರ್ (ಆಹಾರ) ತಹಶೀಲ್ದಾರ್ ಕಾರ್ಯಾಲಯ, ಬಾದಾಮಿ ಇಲ್ಲಿಗೆ ಸ್ಥಳನಿಯುಕ್ತಿಗೊಳಿಸಿರುತ್ತಾರೆ. ಅದರಂತೆ ಈ ಪ್ರಕರಣದಲ್ಲಿ ವಿಭಾಗಾಧಿಕಾರಿಗಳ ಆದೇಶ ತಹಶೀಲ್ದಾರರಿಗೆ ಮೊದಲು ತಲುಪಿದ್ದರಿಂದ ಶ್ರೀ ಡಿ.ಎನ್. ಪಾಟೀಲರವರನ್ನು ದಿನಾಂಕ: 22.01.2002ರಂದು ಕರ್ತವ್ಯಕ್ಕೆ ಹಾಜರುಪಡಿಸಿಕೊಂಡಿದ್ದಾರೆ. ತಹಶೀಲ್ದಾರರು 3 ದಿನಗಳ ನಂತರ ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆಯ ಆಯುಕ್ತರವರಿಂದ ವರ್ಗಾವಣೆಯಾಗಿ ಬಂದ ಶ್ರೀ ರಂಗಸ್ವಾಮಯ್ಯ ಇವರನ್ನು ಕರ್ತವ್ಯಕ್ಕೆ ವರದಿ ಮಾಡಿಸಿಕೊಳ್ಳಲು ಸಾಧ್ಯವಾಗಿರುವುದಿಲ್ಲ. ಆದಕಾರಣ ಶ್ರೀ ಎಫ್.ಬಿ. ನಂದಗಡ ಇವರು ಉದ್ದೇಶಪೂರ್ವಕ ಕರ್ತವ್ಯ ಲೋಪ ಮಾಡಿಲ್ಲವೆಂದು ಪರಿಗಣಿಸಿದೆ. ಅಲ್ಲದೆ ಶ್ರೀ ಎಫ್.ಬಿ ನಂದಗಡ ಇವರು ನೀಡಿರುವ ರಕ್ಷಣಾ ಹೇಳಿಕೆಗಳನ್ನು ಸರ್ಕಾರವು ಪರಿಶೀಲಿಸಿದ ನಂತರ ಅವುಗಳನ್ನು ಒಪ್ಪಿ ಅವರ ವಿರುದ್ಧ ಮುಂದಿನ ಶಿಸ್ತು ಕ್ರಮವನ್ನು ಕೈಬಿಡಲು ನಿರ್ಧರಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆನಾಸ 65 ಆಇಸೇ 2002, ಬೆಂಗಳೂರು, ದಿನಾಂಕ: 14ನೇ ನವೆಂಬರ್, 2005**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಶ್ರೀ ಎಫ್.ಬಿ. ನಂದಗಡ, ಪುರಸಭೆ ತಹಶೀಲ್ದಾರರು, ಜಿಲ್ಲಾ ನಗರಾಭಿವೃದ್ಧಿ ಕೋಶ, ಜಿಲ್ಲಾಧಿಕಾರಿಗಳ ಕಾರ್ಯಾಲಯ, ಧಾರವಾಡ ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 11ರ ರೀತ್ಯ ಹೂಡಲಾದ ಇಲಾಖಾ ವಿಚಾರಣೆಯ ಮುಂದಿನ ಕ್ರಮವನ್ನು ಕೈಬಿಡಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎಸ್. ವಿಶ್ವೇಶ್ವರಯ್ಯ**

ಪೀಠಾಧಿಕಾರಿ, ಆಹಾರ-1, ಶಾಖೆ,

ಆಹಾರ, ನಾಗರೀಕ ಸರಬರಾಜು ಮತ್ತು

ಗ್ರಾಹಕರ ವ್ಯವಹಾರಗಳ ಇಲಾಖೆ.

ಪಿ.ಆರ್.1730

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಆಕುಕ 315 ಸಿಜಿಇ 2005, ಬೆಂಗಳೂರು, ದಿನಾಂಕ:18ನೇ ನವೆಂಬರ್, 2005**

ಸರ್ಕಾರದ ಆದೇಶ ಸಂಖ್ಯೆ: ಆಕುಕ 365 ಸಿಜಿಇ 2004, ಬೆಂಗಳೂರು, ದಿನಾಂಕ: 07.03.2005ರ ಆದೇಶದಲ್ಲಿನ ಕ್ರಮ ಸಂಖ್ಯೆ:"(14) ಅಧ್ಯಕ್ಷರು, ಕರ್ನಾಟಕ ಗ್ರಾಹಕರ ಸೇವಾ ಸಂಸ್ಥೆ, ಭಾರತೀಯ ಗ್ರಾಹಕರ ಸೇವಾ ಅಧ್ಯಯನ ಸಂಸ್ಥೆ, ಎ-91, ವಿಜಯ ಕಿರಣ ಅಪಾರ್ಟ್‌ಮೆಂಟ್ಸ್, 32, ವಿಕ್ಟೋರಿಯಾ ರಸ್ತೆ, ಬೆಂಗಳೂರು-560047" ರ ಬದಲಾಗಿ "ಗ್ರಾಹಕ ಶಕ್ತಿ, ನಂ.57, 18ನೇ ಕ್ರಾಸ್, 4ನೇ ಮುಖ್ಯ ರಸ್ತೆ, ಚಿತ್ರಕೂಟ ಅಪಾರ್ಟ್‌ಮೆಂಟ್ಸ್, ಫ್ಲ್ಯಾಟ್ ನಂ.46, ಮಲ್ಲೇಶ್ವರಂ, ಬೆಂಗಳೂರು-560055" ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಆರ್. ಶಂಕರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

ಪಿ.ಆರ್.1734

## ಕಂದಾಯ ಸಚಿವಾಲಯ

**ವಿಷಯ :** ಧಾರವಾಡ ಜಿಲ್ಲೆಯ ಒಂದು ದೇವಸ್ಥಾನವನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಹೊರತುಪಡಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಕಂಇ 77 ಮುಸೇವಿ 2003, ದಿನಾಂಕ: 30.04.2003.
2. ಧಾರ್ಮಿಕ ದತ್ತಿ ಆಯುಕ್ತರ ಪತ್ರ ಸಂಖ್ಯೆ: ಏಕರೂಪಶಾಸನ/ ಸಿಆರ್/ 7/ 2004-05, ದಿನಾಂಕ: 30.06.2004.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಅಧಿಸೂಚನೆಯಲ್ಲಿ ರಾಜ್ಯದಲ್ಲಿನ 34245 ದೇವಸ್ಥಾನಗಳನ್ನು ಅಧಿಸೂಚಿತ ಸಂಸ್ಥೆಗಳನ್ನಾಗಿ ಪ್ರಕಟಿಸಿರುತ್ತದೆ. ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಧಾರವಾಡ ಜಿಲ್ಲೆಯ ಹುಬ್ಬಳ್ಳಿ ತಾಲ್ಲೂಕು, ದಾಜಿಬಾನಪೇಟೆ ಶ್ರೀ ಗಣಪತಿ ದೇವಸ್ಥಾನವು ಸೋಮವಂಶ ಸಹಸ್ರಾರ್ಜುನ ಕ್ಷತ್ರಿಯ ಸಮಾಜಕ್ಕೆ ಸೇರಿರುವುದೆಂದು ಜಿಲ್ಲಾಧಿಕಾರಿಗಳು/ ಧಾರ್ಮಿಕ ದತ್ತಿ ಆಯುಕ್ತರು ತಿಳಿಸುತ್ತಾ, ಸದರಿ ದೇವಸ್ಥಾನವನ್ನು ಅಧಿಸೂಚಿತ ಪಟ್ಟಿಯಿಂದ ಕೈಬಿಡಲು ಶಿಫಾರಸ್ಸು ಮಾಡಿದ್ದಾರೆ. ಸದರಿ ಶಿಫಾರಸ್ಸನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 87 ಮುಆಬಿ 2004, ಬೆಂಗಳೂರು, ದಿನಾಂಕ: 8ನೇ ಡಿಸೆಂಬರ್, 2005**

ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ 1997ರ ಅಧಿನಿಯಮ 1 ಉಪನಿಯಮ 4(ii)ರ ಪ್ರಕಾರ ಒಂದು ಹಿಂದೂ ಧಾರ್ಮಿಕ ಪಂಗಡವು ಸ್ಥಾಪಿಸಿರುವ, ವ್ಯವಸ್ಥೆಗೊಳಿಸಿರುವ, ನಡೆಸುತ್ತಿರುವ ಅಥವಾ ನಿರ್ವಹಿಸುತ್ತಿರುವ ಯಾವುದೇ ಹಿಂದೂ ಧಾರ್ಮಿಕ ಸಂಸ್ಥೆಗೆ ಅಥವಾ ಧರ್ಮಾದಾಯ ದತ್ತಿಗೆ ಅನ್ವಯಿಸತಕ್ಕದ್ದಲ್ಲ ಎಂದಿರುವುದರಿಂದ ಸರ್ಕಾರದ ಆದೇಶ ಸಂಖ್ಯೆ: ಕಂಇ 77 ಮುಸೇವಿ 2003 ದಿನಾಂಕ: 30.04.2003ರ ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಧಾರವಾಡ ಜಿಲ್ಲೆಯ, ಹುಬ್ಬಳ್ಳಿ ತಾಲ್ಲೂಕಿನ ಹುಬ್ಬಳ್ಳಿ ನಗರದ ದಾಬೀಬಾನ ಪೇಟೆಯ ಶ್ರೀ ಗಣಪತಿ ದೇವಸ್ಥಾನ, ಕ್ರಮ ಸಂಖ್ಯೆ: 189, ಪುಟ ಸಂಖ್ಯೆ: 300ನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಹೊರತುಪಡಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶಿವಲಿಂಗ**

ಪೀಠಾಧಿಕಾರಿ,

ಕಂದಾಯ ಇಲಾಖೆ (ಮುಜರಾಯಿ).

ಪಿ.ಆರ್.1735

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಎಂ.ಎಸ್. ಮಹಂತೇಶಯ್ಯ, ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು), ಕರ್ನಾಟಕ ಸರ್ಕಾರದ ಸಚಿವಾಲಯರವರು ಇಲಾಖಾ ವಿಚಾರಣೆಯಲ್ಲಿ ಮಂಡನಾಧಿಕಾರಿಯಾಗಿ ಕಾರ್ಯನಿರ್ವಹಿಸಿದ್ದಕ್ಕೆ ಸಂಭಾವನೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 63 ಎಸ್‌ಇಎನ್ 04, ದಿನಾಂಕ: 21.02.2005.
2. ಶ್ರೀ ಎಂ.ಎಸ್. ಮಹಂತೇಶಯ್ಯ ಇವರ ದಿನಾಂಕ: 05.11.2005ರ ಮನವಿ.

**ಪ್ರಸ್ತಾವನೆ:**

ಶ್ರೀ ಎಂ.ಕೆ. ಮದಿಹಳ್ಳಿ, ಸರ್ಕಾರದ ಉಪ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಮೇಲೆ (1)ರಲ್ಲಿ ಓದಲಾದ ದಿನಾಂಕ: 21.02.2005ರ ಸರ್ಕಾರಿ ಆದೇಶದಲ್ಲಿ ಶ್ರೀ ಎಂ.ಎಸ್. ಮಹಂತೇಶಯ್ಯ, ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು), ಕರ್ನಾಟಕ ಸರ್ಕಾರದ ಸಚಿವಾಲಯರವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ಈ ಬಗ್ಗೆ ವಿಚಾರಣೆ ಮುಕ್ತಾಯಗೊಂಡಿರುತ್ತದೆ ಎಂದು ತಿಳಿಸಿ ದಿನಾಂಕ: 02.05.2005 ರಿಂದ 26.09.2005ರವರೆಗಿನ ಅವಧಿಯಲ್ಲಿ ಒಟ್ಟು 9 ದಿನಗಳ ಕಾಲ ಮಂಡನಾಧಿಕಾರಿಯಾಗಿ ಕಾರ್ಯನಿರ್ವಹಿಸಿದ್ದು, ಈ ಸಂಬಂಧ ಮಂಡನಾಧಿಕಾರಿಗಳಿಗೆ ಅರ್ಹವಿರುವ ಸಂಭಾವನೆ ಮಂಜೂರು ಮಾಡಲು ಮೇಲೆ (2)ರಲ್ಲಿ ಓದಲಾದ ಮನವಿಯಲ್ಲಿ ಸದರಿ ಅಧಿಕಾರಿಯವರು ಕೋರಿರುತ್ತಾರೆ. ಈ ಬಗ್ಗೆ ಪರಿಶೀಲಿಸಿ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 63 ಎಸ್‌ಇಎನ್ 04, ಬೆಂಗಳೂರು, ದಿನಾಂಕ: 12ನೇ ಡಿಸೆಂಬರ್, 2005**

ಸರ್ಕಾರವು ಶ್ರೀ ಎಂ.ಎಸ್. ಮಹಂತೇಶಯ್ಯ, ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು), ಕರ್ನಾಟಕ ಸರ್ಕಾರದ ಸಚಿವಾಲಯರವರು ಶ್ರೀ ಎಂ.ಕೆ. ಮದಿಹಳ್ಳಿ, ಸರ್ಕಾರದ ಉಪ ಕಾರ್ಯದರ್ಶಿ ಇವರ ವಿರುದ್ಧದ ಇಲಾಖಾ ವಿಚಾರಣೆ ಪ್ರಕರಣದಲ್ಲಿ ದಿನಾಂಕ: 02.05.2005ರಿಂದ 26.09.2005ರವರೆಗಿನ ಅವಧಿಯಲ್ಲಿ ಒಟ್ಟು 9 ದಿನಗಳ ಕಾಲ ಮಂಡನಾಧಿಕಾರಿಯಾಗಿ ಕಾರ್ಯನಿರ್ವಹಿಸಿರುವುದಕ್ಕೆ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 15 ಸೇಇವಿ 99 ದಿನಾಂಕ: 14.03.2000ರನ್ವಯ ವಿಚಾರಣೆಯ ದಿನ ಒಂದಕ್ಕೆ ಅವರ ಮೂಲ ವೇತನದ ಶೇಕಡ 10 ರಂತೆ ಗರಿಷ್ಠ ರೂ.100.00ರಂತೆ ಸಂಭಾವನೆಯನ್ನು ಮಂಜೂರು ಮಾಡಿದೆ.

ಈ ಬಗೆಗಿನ ವೆಚ್ಚವನ್ನು ಆಯವ್ಯಯ ಲೆಕ್ಕ ಶೀರ್ಷಿಕೆ "2052- ಸಚಿವಾಲಯ ಸಾಮಾನ್ಯ ಸೇವೆಗಳು-090 ಸಚಿವಾಲಯ-01, ಕರ್ನಾಟಕ ಸರ್ಕಾರದ ಸಚಿವಾಲಯ-051 ಸಾಮಾನ್ಯ ವೆಚ್ಚಗಳು" ರಲ್ಲಿ ಭರಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ರಘುರಾಮ್ ಭಂಡಾರಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-3).

ಪಿ.ಆರ್.1737

**ವಿಷಯ :** ಕರ್ನಾಟಕ ಸರ್ಕಾರದ ಸಚಿವಾಲಯದ ಕಂದಾಯ ಇಲಾಖೆಯ ಕಾರ್ಯದರ್ಶಿ ಹುದ್ದೆಯನ್ನು ಪ್ರಧಾನ ಕಾರ್ಯದರ್ಶಿ ಹುದ್ದೆ ಎಂದು ಉನ್ನತೀಕರಿಸುವ ಬಗ್ಗೆ.

**ಓದಲಾಗಿದೆ :** ಅಧಿಸೂಚನೆ ಸಂಖ್ಯೆ: ಡಿಪಿಎಆರ್ 332 ಎಸ್‌ಎಎಸ್ 2005, ದಿನಾಂಕ: 03.11.2005.

**ಪ್ರಸ್ತಾವನೆ:**

ಮೇಲೆ ದಿನಾಂಕ: 03.11.2005ರಲ್ಲಿ ಓದಲಾಗಿರುವ ಅಧಿಸೂಚನೆಯಲ್ಲಿ ಶ್ರೀ ಎಸ್.ಎಂ.ಜಾಮ್‌ದಾರ್, ಐಎಎಸ್, ಸರ್ಕಾರದ ಕಾರ್ಯದರ್ಶಿ, ಕಂದಾಯ ಇಲಾಖೆ ಇವರಿಗೆ ಐಎಎಸ್‌ನ ಸೂಪರ್ ಟೈಂ ಸ್ಕೇಲ್‌ಗೆ ಸ್ಥಾನಪನ್ನ ಬಡ್ತಿ ನೀಡಿ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ ಹುದ್ದೆಗೆ ನೇಮಿಸಲಾಗಿರುತ್ತದೆ. ಆದ್ದರಿಂದ ಸರ್ಕಾರದ ಕಾರ್ಯದರ್ಶಿ, ಕಂದಾಯ ಇಲಾಖೆ ಹುದ್ದೆಯನ್ನು ಉನ್ನತೀಕರಿಸುವ ಅಗತ್ಯತೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 70 ಸಸಿವಿ 2005, ಬೆಂಗಳೂರು, ದಿನಾಂಕ: 13ನೇ ಡಿಸೆಂಬರ್, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಕಂದಾಯ ಇಲಾಖೆಯ ಕಾರ್ಯದರ್ಶಿ ಹುದ್ದೆಯನ್ನು ಶ್ರೀ ಎಸ್.ಎಂ.ಜಾಮ್‌ದಾರ್, ಐ.ಎ.ಎಸ್. ಇವರು ಕಾರ್ಯ ವರದಿಮಾಡಿಕೊಂಡ ದಿನಾಂಕದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ ಹುದ್ದೆ ಎಂದು ಉನ್ನತೀಕರಿಸುವುದರೊಂದಿಗೆ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 69 ಆಶೀಸೇ 2003, ದಿನಾಂಕ: 03.07.2003ರಲ್ಲಿ ನಿಗದಿಪಡಿಸಿರುವಂತೆ ಹೆಚ್ಚುವರಿ ಪೂರಕ ಸಿಬ್ಬಂದಿ ಹುದ್ದೆಗಳನ್ನು ಸಹ ಮಂಜೂರು ಮಾಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1197 ಸೇ-4/ 2003, ದಿನಾಂಕ: 29.11.2003ರಲ್ಲಿ ನೀಡಿದ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಪಿ. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-2).

ಪಿ.ಆರ್.1738

**ವಿಷಯ :** ಉಪ ಮುಖ್ಯಮಂತ್ರಿಯವರ ಸಚಿವಾಲಯದ ಅಧಿಕಾರಿ: ನೌಕರರಿಗೆ ವಿಧಾನ ಮಂಡಲ ಅಧಿವೇಶನ ಸಮಯದಲ್ಲಿ ನೀಡಲಾಗುತ್ತಿರುವ ಗೌರವ ಧನವನ್ನು ಪರಿಷ್ಕರಿಸುವ ಬಗ್ಗೆ.

**ಓದಲಾಗಿದೆ :** ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 302 ಸಆಸೇ 2004, ದಿನಾಂಕ: 25.02.2005.

**ಪ್ರಸ್ತಾವನೆ:**

ಉಪ ಮುಖ್ಯ ಮಂತ್ರಿಗಳ ಸಚಿವಾಲಯದ ಅಧಿಕಾರಿ: ನೌಕರರಿಗೆ ವಿಧಾನ ಮಂಡಲ ಅಧಿವೇಶನ ಸಮಯದಲ್ಲಿ ನಿರ್ವಹಿಸುವ ಕಾರ್ಯಕ್ಕಾಗಿ ಮೇಲೆ ಓದಲಾಗಿರುವ ದಿನಾಂಕ: 25.02.2005ರ ಸರ್ಕಾರಿ ಆದೇಶದ ಅನ್ವಯ ಗೌರವ ಧನವನ್ನು ಮಾನ್ಯ ಮುಖ್ಯಮಂತ್ರಿಯವರ ಸಚಿವಾಲಯದ ಸಿಬ್ಬಂದಿಗೆ ನೀಡುತ್ತಿರುವ ದರಗಳಲ್ಲಿಯೇ ನೀಡಲು ಆದೇಶಿಸಲಾಗಿರುತ್ತದೆ.

ಪ್ರಸ್ತುತ ಕರ್ನಾಟಕ ವಿಧಾನ ಸಭೆಯ ಸಚಿವಾಲಯದ ಗ್ರೂಪ್ 'ಬಿ' ಅಧಿಕಾರಿಗಳು ಮತ್ತು ಗ್ರೂಪ್ 'ಸಿ' ಮತ್ತು 'ಡಿ' ನೌಕರರಿಗೆ ಆದೇಶ ಸಂಖ್ಯೆ: ಕವಿಸಸ/ ಆ-1/ 49/ ಗೌದ/ 05, ದಿನಾಂಕ: 05.04.2005ರನ್ವಯ ಗೌರವ ಧನವನ್ನು ದಿನ ಒಂದಕ್ಕೆ ರೂ. 125.00 (ರೂ. ಒಂದುನೂರಾ ಇಪ್ಪತ್ತೈದು ಮಾತ್ರ) ಗಳಿಗೆ ದಿನಾಂಕ: 11.03.2005 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಹೆಚ್ಚಿಸಲಾಗಿರುತ್ತದೆ. ಅದರಂತೆ, ಉಪ ಮುಖ್ಯ ಮಂತ್ರಿಯವರ ಸಚಿವಾಲಯದ ಅಧಿಕಾರಿ: ನೌಕರರಿಗೆ ಈ ಗೌರವ ಧನವನ್ನು ಪರಿಷ್ಕರಿಸುವ ಬಗ್ಗೆ ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 302 ಸಅಸೇ 2004, ಬೆಂಗಳೂರು, ದಿನಾಂಕ: 13ನೇ ಡಿಸೆಂಬರ್, 2005**

ಉಪ ಮುಖ್ಯಮಂತ್ರಿಯವರ ಸಚಿವಾಲಯದ ಗ್ರೂಪ್ 'ಬಿ' ಅಧಿಕಾರಿಗಳು ಹಾಗೂ ಗ್ರೂಪ್ 'ಸಿ' ಮತ್ತು ಗ್ರೂಪ್ 'ಡಿ' ನೌಕರರಿಗೆ ವಿಧಾನ ಮಂಡಲ ಅಧಿವೇಶನದ ಸಮಯದಲ್ಲಿ ನಿರ್ವಹಿಸುವ ಕಾರ್ಯಕ್ಕಾಗಿ ನೀಡಲಾಗುತ್ತಿರುವ ಗೌರವ ಧನವನ್ನು ದಿನಾಂಕ: 11.03.2005 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ರೂ.125.00 (ಒಂದು ನೂರಾ ಇಪ್ಪತ್ತೈದು ಮಾತ್ರ) (ಪ್ರತಿ ದಿನ) ಗಳಿಗೆ ಹೆಚ್ಚಿಸಲು ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: ಆಇ 637 ವೆಚ್ಚ- 5/ 2005, ದಿನಾಂಕ: 02.12.2005ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಪಿ. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-2).

ಪಿ.ಆರ್.1739

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಬೆಂಗಳೂರು ವೈದ್ಯಕೀಯ ಕಾಲೇಜು: ಮೈಸೂರು ವೈದ್ಯಕೀಯ ಕಾಲೇಜು: ಕರ್ನಾಟಕ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ ಮತ್ತು ವಿಜಯನಗರ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಗಳಲ್ಲಿನ ಹೆಚ್ಚುವರಿ ಮೃತ ದೇಹಗಳ ಮಾರಾಟ.

**ಓದಲಾಗಿದೆ :** ತಾ: 17.01.2005ರ ಗುಲ್ಬರ್ಗಾದ ಎಂ.ಆರ್. ಮೆಡಿಕಲ್ ಕಾಲೇಜ್‌ನ ಪತ್ರ.

**ಪೀಠಿಕೆ :**

1. ಸರ್ಕಾರಿ ವೈದ್ಯಕೀಯ ಕಾಲೇಜುಗಳಾದ ಬೆಂಗಳೂರು ಕಾಲೇಜು: ಮೈಸೂರು ವೈದ್ಯಕೀಯ ಕಾಲೇಜು: ಕರ್ನಾಟಕ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ ಮತ್ತು ವಿಜಯನಗರ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಗಳಲ್ಲಿನ ಅನಾಟಮಿ ವಿಭಾಗದಲ್ಲಿ ಹಾಗೂ ಫೊರೆನ್ಸಿಕ್ ಮೆಡಿಸಿನ್ ವಿಭಾಗದಲ್ಲಿ ಕಾಲಕಾಲಕ್ಕೆ ಹೆಚ್ಚುವರಿಯಾಗಿ ಲಭ್ಯವಾಗುವ ಮೃತ ದೇಹಗಳ ಪರಿಣಾಮಕಾರಿಯಾದ ವಿಲೇವಾರಿಯನ್ನು ಸಕಲವಲಯಗಳಿಂದ ಈಗ ಹಾಲಿ ಜಾರಿಯಲ್ಲಿರುವ ಪದ್ಧತಿಯ ಬೆಳಕಿನಲ್ಲಿ ಸರ್ಕಾರವು ಪರಿಶೀಲಿಸಿದೆ. ಪ್ರತಿಯೊಂದು ಸರ್ಕಾರಿ ಕಾಲೇಜಿನ ಅನಾಟಮಿ ವಿಭಾಗಕ್ಕೆ ಬೋಧನಾ ಕಾರ್ಯಾಚರಣೆಗೆ ಅಗತ್ಯವಾದ ಶವಗಳನ್ನು ಉಳಿಸಿಕೊಂಡು ಹೆಚ್ಚುವರಿಯಾದ ಶವಗಳನ್ನು ಖಾಸಗೀ ವೈದ್ಯಕೀಯ ದಂತ, ಅರೆವೈದ್ಯಕೀಯ ಆಯುರ್ವೇದಿಕ್, ಯುನಾನಿ ಹೋಮಿಯೋಪತಿ ಮತ್ತು ನ್ಯಾಚುರೋಪತಿ ಹಾಗೂ ಯೋಗಿಕ್ ವಿಜ್ಞಾನ ಕಾಲೇಜುಗಳಿಗೆ ಮಾರಾಟ ಮಾಡುವುದನ್ನು ಪರಿಗಣಿಸಲಾಗಿದೆ. ಅದರಿಂದಾಗಿ ಹೆಚ್ಚು ಮತ್ತು ಅನಗತ್ಯವಾಗಿ ಲಭ್ಯವಾಗುವ ಶವಗಳನ್ನು ವಿಲೇವಾರಿ ಮಾಡುವುದರಿಂದ ಇತರೇ ಖಾಸಗಿ ವೈದ್ಯಕೀಯ ಸಂಸ್ಥೆಗಳಿಗೆ ಪ್ರಯೋಜನಕಾರಿಯಾಗುತ್ತದೆ. ಅದನ್ನು 10,000 ರೂ.ಗಳ ಮೌಲ್ಯಕ್ಕೆ ಮಾರಾಟ ಮಾಡುವುದು ಸೂಕ್ತವೆಂದು ಸರ್ಕಾರ ತಾತ್ವಿಕವಾಗಿ ನಿರ್ಧರಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 183 ಎಂಎಸ್‌ಎಫ್ 2005, ಬೆಂಗಳೂರು, ದಿನಾಂಕ: 17ನೇ ಸೆಪ್ಟೆಂಬರ್, 2005**

2. ಸರ್ಕಾರಿ ವೈದ್ಯಕೀಯ ಕಾಲೇಜುಗಳಾದ ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಮೈಸೂರು ವೈದ್ಯಕೀಯ ಕಾಲೇಜ್, ಹುಬ್ಬಳ್ಳಿಯ ಕರ್ನಾಟಕ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ ಮತ್ತು ಬಳ್ಳಾರಿಯ ವಿಜಯನಗರ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಗಳಲ್ಲಿ ಹೆಚ್ಚುವರಿಯಾಗಿ ಲಭ್ಯವಾಗುವ ಮೃತ ದೇಹಗಳನ್ನು ಪ್ರತಿಯೊಂದು ಮೃತ ದೇಹಕ್ಕೆ 10,000 ರೂ.ಗಳಂತೆ (ಹತ್ತು ಸಾವಿರ ರೂ.ಗಳು ಮಾತ್ರ) ಖಾಸಗೀ ವೈದ್ಯಕೀಯ, ದಂತ, ಅರೆವೈದ್ಯಕೀಯ, ಆಯುರ್ವೇದ, ಯುನಾನಿ, ಹೋಮಿಯೋಪತಿ ಮತ್ತು ನ್ಯಾಚುರೋಪತಿ ಹಾಗೂ ಯೋಗಿಕ್ ವಿಜ್ಞಾನ ಸಂಸ್ಥೆಗಳಿಗೆ ಮಾರಾಟದ ಮೂಲಕ ವಿಲೇವಾರಿ ಮಾಡಲು ಸರ್ಕಾರದ ಮಂಜೂರಾತಿಯನ್ನು ಈ ಮೂಲಕ ನೀಡಲಾಗಿದೆ.

3. ಮೇಲ್ಕಂಡ ಮಾರಾಟದ ಮೂಲಕ ವಿಲೇವಾರಿ ಮಾಡುವುದರಿಂದ ಸ್ವೀಕೃತವಾದ ಮೊತ್ತವನ್ನು ರಾಜ್ಯ ಸರ್ಕಾರದ ನಿಧಿಗೆ ಪ್ರತಿಯೊಂದು ಕಾಲೇಜು ಜಮೆ ಮಾಡತಕ್ಕದ್ದು.

4. ಮೇಲ್ಕಂಡ ಪದ್ಧತಿಯು ಈ ತಕ್ಷಣದಿಂದ ಜಾರಿಗೆ ಬರುತ್ತದೆ. ಇದು ಕೇವಲ ಸರ್ಕಾರಿ ಕಾಲೇಜುಗಳಿಗೆ ಮಾತ್ರ ಸೀಮಿತವಾಗಿರುತ್ತದೆ. ಭವಿಷ್ಯದಲ್ಲಿ ಮತ್ತೊಂದು ಕ್ರಿಯಾಯೋಜನೆಯನ್ನು ರೂಪಿಸಿ ಜಾರಿಗೆ ತರುವವರೆವಿಗೆ ಈ ಪದ್ಧತಿಯನ್ನು ಅನುಷ್ಠಾನಗೊಳಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ನಾಗರಾಜು**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ).

ಪಿ.ಆರ್.1741

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಮುಖ್ಯ ಕಾರ್ಯದರ್ಶಿಯವರ ಆಪ್ತ ಶಾಖೆಯ ಅಧಿಕಾರಿ: ನೌಕರರಿಗೆ ವಿಧಾನ ಮಂಡಲ ಅಧಿವೇಶನ ಸಮಯದಲ್ಲಿ ನೀಡಲಾಗುತ್ತಿರುವ ಗೌರವ ಧನವನ್ನು ಪರಿಷ್ಕರಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 196 ಸಅಸೇ 2003 ದಿನಾಂಕ:30.09.2003.
2. ಕಡತ ಸಂಖ್ಯೆ: ಸಿಆಸುಇ 67180 ಸಿ-1, 2005.

**ಪ್ರಸ್ತಾವನೆ:**

ಮುಖ್ಯ ಕಾರ್ಯದರ್ಶಿಯವರ ಆಪ್ತ ಶಾಖೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿ: ನೌಕರರಿಗೆ ವಿಧಾನ ಮಂಡಲ ಅಧಿವೇಶನ ಸಮಯದಲ್ಲಿ ನೀಡಲಾಗುತ್ತಿರುವ ಗೌರವ ಧನವನ್ನು ದಿನಾಂಕ: 27.02.2003 ರಿಂದ ಈ ಕೆಳಕಂಡ ದರಗಳಲ್ಲಿ ಪರಿಷ್ಕರಿಸಿ ಮಂಜೂರು ಮಾಡಲಾಗಿರುತ್ತದೆ.

| | |
|---|---|
| ಅ. ಗ್ರೂಪ್ 'ಬಿ' ಅಧಿಕಾರಿಗಳು | ರೂ. 60 ರಿಂದ ರೂ. 90 ಗಳಿಗೆ (ಪ್ರತಿ ದಿನ) |
| ಆ. ಗ್ರೂಪ್ 'ಸಿ' ಮತ್ತು 'ಡಿ' ನೌಕರರು | ರೂ. 50 ರಿಂದ ರೂ. 75 ಗಳಿಗೆ (ಪ್ರತಿ ದಿನ) |

ಕರ್ನಾಟಕ ವಿಧಾನ ಸಭೆ ಸಚಿವಾಲಯದ ಅಧಿಕಾರಿ: ನೌಕರರಿಗೆ ವಿಧಾನ ಮಂಡಲ ಅಧಿವೇಶನ ಸಮಯದಲ್ಲಿ ನೀಡಲಾಗುತ್ತಿರುವ ಗೌರವ ಧನವನ್ನು ಆದೇಶ ಸಂಖ್ಯೆ: ಕವಿಸಸ/ ಆ-1/ 49/ ಧ/ 05, ದಿನಾಂಕ: 05.04.2005 ರಲ್ಲಿ ದಿನಾಂಕ: 11.03.2005 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ರೂ.125.00 (ಪ್ರತಿ ದಿನ) ಗಳಿಗೆ ಹೆಚ್ಚಿಸಲಾಗಿದ್ದು, ಅದರಂತೆ ಮುಖ್ಯ ಕಾರ್ಯದರ್ಶಿಯವರ ಆಪ್ತ ಶಾಖೆಯ ಅಧಿಕಾರಿ: ನೌಕರರಿಗೂ ಸಹ ಈ ಗೌರವ ಧನವನ್ನು ಹೆಚ್ಚಿಸುವ ಬಗ್ಗೆ ಆದೇಶ ಹೊರಡಿಸುವಂತೆ ಪ್ರಸ್ತಾವನೆ ಕಳುಹಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 436 ಸಅಸೇ 2005, ಬೆಂಗಳೂರು, ದಿನಾಂಕ: 11ನೇ ಡಿಸೆಂಬರ್, 2005**

ಮುಖ್ಯ ಕಾರ್ಯದರ್ಶಿಯವರ ಆಪ್ತ ಶಾಖೆಯ ಗ್ರೂಪ್ 'ಬಿ' ಅಧಿಕಾರಿಗಳು ಹಾಗೂ ಗ್ರೂಪ್ 'ಸಿ' ಮತ್ತು ಗ್ರೂಪ್ 'ಡಿ' ನೌಕರರಿಗೆ ವಿಧಾನ ಮಂಡಲ ಅಧಿವೇಶನದ ಸಮಯದಲ್ಲಿ ನಿರ್ವಹಿಸುವ ಕಾರ್ಯಕ್ಕಾಗಿ ನೀಡಲಾಗುತ್ತಿರುವ ಗೌರವ ಧನವನ್ನು ದಿನಾಂಕ: 11.03.2005 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ರೂ.125.00 (ಒಂದು ನೂರಾ ಇಪ್ಪತ್ತೈದು ಮಾತ್ರ) (ಪ್ರತಿ ದಿನ) ಗಳಿಗೆ ಹೆಚ್ಚಿಸಲು ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 810 ವೆಚ್ಚ-5/ 2005- ದಿನಾಂಕ: 17.11.2005ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಪಿ. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-2).

ಪಿ.ಆರ್.1743

**ವಿಷಯ :** ಜಲಸಂಪನ್ಮೂಲ ಇಲಾಖೆಯಲ್ಲಿರುವ ಕಾವೇರಿ ಜಲವಿವಾದಕ್ಕೆ ಸಂಬಂಧಿಸಿದ ವಿಶೇಷ ಕರ್ತವ್ಯಾಧಿಕಾರಿ (ತಾಂತ್ರಿಕ) ಹುದ್ದೆಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 14 ಸಸಿವಿ 91, ದಿನಾಂಕ: 24.10.91.
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 06 ಸಸಿವಿ 92, ದಿನಾಂಕ: 02.05.92.
3. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 03 ಸಸಿವಿ 94, ದಿನಾಂಕ: 23.02.94.
4. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 10 ಸಸಿವಿ 96, ದಿನಾಂಕ: 16.05.96.
5. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 17 ಸಸಿವಿ 98, ದಿನಾಂಕ: 12.05.98.
6. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 80 ಸಅಸೇ 99, ದಿನಾಂಕ: 02.06.99.
7. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 10 ಸಸಿವಿ 2000, ದಿನಾಂಕ: 21.03.01.
8. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 13 ಸಸಿವಿ 2001, ದಿನಾಂಕ: 30.03.01.
9. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 43 ಸಸಿವಿ 2002, ದಿನಾಂಕ: 21.09.02.
10. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 39 ಸಸಿವಿ 2003, ದಿನಾಂಕ: 02.05.03.
11. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 90 ಸಸಿವಿ 2003, ದಿನಾಂಕ: 01.01.04.
12. ಜಲಸಂಪನ್ಮೂಲ ಇಲಾಖೆಯ ಕಡತ ಸಂಖ್ಯೆ: ಜಸಂಇ 91 ಕಾವಿಇ 2005.

**ಪ್ರಸ್ತಾವನೆ:**

ಕ್ರಮ ಸಂಖ್ಯೆ: (1)ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ಅಂತರ ರಾಜ್ಯ ಕಾವೇರಿ ನದಿ ನೀರಿನ ಹಂಚಿಕೆಯ ವಿವರ ಕುರಿತು ಕೆಲಸ ಕಾರ್ಯಗಳನ್ನು ನಿರ್ವಹಿಸಲು ಕರ್ನಾಟಕ ಸರ್ಕಾರ ಸಚಿವಾಲಯದ ಜಲಸಂಪನ್ಮೂಲ ಇಲಾಖೆಯಲ್ಲಿ ಕೆಳಕಂಡ ಹುದ್ದೆಗಳನ್ನು 6 ತಿಂಗಳ ಅವಧಿಗೆ ಸೃಜಿಸಲಾಗಿದೆ.

| | | |
|---|---|---|
| ಅ. | ಉಪ ಕಾರ್ಯದರ್ಶಿ (ತಾಂತ್ರಿಕ) | 1 ಹುದ್ದೆ |
| ಆ. | ಅಧೀನ ಕಾರ್ಯದರ್ಶಿ (ತಾಂತ್ರಿಕ) | 1 ಹುದ್ದೆ |

ಕ್ರಮ ಸಂಖ್ಯೆ (2)ರಿಂದ (5)ರಲ್ಲಿ ಓದಲಾಗಿರುವ ಸರ್ಕಾರದ ಆದೇಶಗಳಲ್ಲಿ ಸದರಿ ಹುದ್ದೆಗಳನ್ನು ಕಾಲಾನುಕಾಲಕ್ಕೆ ಮುಂದುವರೆಸಲಾಗಿದೆ.

ಕ್ರಮ ಸಂಖ್ಯೆ (6)ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ಸರ್ಕಾರದ ಅಧೀನ ಕಾರ್ಯದರ್ಶಿ (ತಾಂತ್ರಿಕ) ಹುದ್ದೆಯನ್ನು ರೂ.9580-14200ರ ವೇತನ ಶ್ರೇಣಿಯ ವಿಶೇಷ ಕರ್ತವ್ಯಾಧಿಕಾರಿ (ತಾಂತ್ರಿಕ) ಹುದ್ದೆ ಎಂದು ಉನ್ನತೀಕರಿಸಲಾಗಿದೆ ಹಾಗೂ ಉಪ ಕಾರ್ಯದರ್ಶಿ (ತಾಂತ್ರಿಕ) ಹುದ್ದೆಯನ್ನು ನಿಷ್ಕ್ರಿಯಗೊಳಿಸಲಾಗಿದೆ.

ವಿಶೇಷ ಕರ್ತವ್ಯಾಧಿಕಾರಿ (ತಾಂತ್ರಿಕ) ಹುದ್ದೆಯನ್ನು ಕಾಲಕಾಲಕ್ಕೆ ವಿಸ್ತರಿಸಿಕೊಂಡು ಬರಲಾಗಿದ್ದು, ಅಂತಿಮವಾಗಿ ಕ್ರಮ ಸಂಖ್ಯೆ (11)ರಲ್ಲಿ ಓದಲಾದ ಆದೇಶದ ಅನ್ವಯ ಈ ಹುದ್ದೆಯ ವಿಸ್ತರಿಸಿದ ಅವಧಿಯು ದಿನಾಂಕ: 31.12.2005ಕ್ಕೆ ಮುಕ್ತಾಯಗೊಳ್ಳಲಿದೆ.

ಕ್ರಮ ಸಂಖ್ಯೆ (12)ರಲ್ಲಿ ಓದಲಾಗಿರುವ ಕಡತದಲ್ಲಿ ಜಲಸಂಪನ್ಮೂಲ ಇಲಾಖೆಯು ಅಂತರ ರಾಜ್ಯ ಜಲವಿವಾದ ಹಾಗೂ ಕಾವೇರಿ ನದಿ ನೀರಿನ ಹಂಚಿಕೆ ವಿವಾದಗಳು ಕೃಷ್ಣಾ ವಿವಾದ ಹಾಗೂ ಇನ್ನು ಹಲವು ಮುಖ್ಯ ವಿಷಯಗಳನ್ನು ನಿರ್ವಹಿಸಬೇಕಾಗಿರುವುದರಿಂದ ಸದರಿ ವಿಶೇಷ ಕರ್ತವ್ಯಾಧಿಕಾರಿ (ತಾಂತ್ರಿಕ) ಹುದ್ದೆಯನ್ನು ಮತ್ತೆ ಒಂದು ವರ್ಷದ ಅವಧಿಗೆ ಮುಂದುವರೆಸುವ ಬಗ್ಗೆ ಆದೇಶ ಹೊರಡಿಸುವಂತೆ ಕೋರಿರುತ್ತಾರೆ. ಈ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿದ್ದು, ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 61 ಸಸಿವಿ 2005, ಬೆಂಗಳೂರು, ದಿನಾಂಕ:12ನೇ ಡಿಸೆಂಬರ್, 2005**

ಕರ್ನಾಟಕ ಸರ್ಕಾರ ಸಚಿವಾಲಯದ ಜಲಸಂಪನ್ಮೂಲ ಇಲಾಖೆಯಲ್ಲಿನ ವಿಶೇಷ ಕರ್ತವ್ಯಾಧಿಕಾರಿ (ತಾಂತ್ರಿಕ) ಹುದ್ದೆಯನ್ನು ದಿನಾಂಕ: 01.01.2006 ರಿಂದ 31.12.2006 ರವರೆಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.07.1996ರಲ್ಲಿ ಆರ್ಥಿಕ ಇಲಾಖೆಯ ಸಹಮತಿಯನ್ನು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಪಿ. ಪ್ರಭು**
ಪಿ.ಆರ್.1744 ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-2).

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಸರ್ಕಾರದ ಕಾರ್ಯದರ್ಶಿ ಹುದ್ದೆಯನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆ ಎಂದು ಉನ್ನತೀಕರಿಸುವ ಬಗ್ಗೆ.

**ಓದಲಾಗಿದೆ :** ಅಧಿಸೂಚನೆ ಸಂಖ್ಯೆ: ಡಿಪಿಎಆರ್ 332 ಎಸ್‌ಎಎಸ್ 2005, ದಿನಾಂಕ: 03.11.2005.

**ಪ್ರಸ್ತಾವನೆ:**

ಮೇಲೆ ದಿನಾಂಕ: 03.11.2005ರಲ್ಲಿ ಓದಲಾಗಿರುವ ಅಧಿಸೂಚನೆಯಲ್ಲಿ ಶ್ರೀ ವಿ.ಪಿ. ಬಾಳಿಗಾರ್, ಐ.ಎ.ಎಸ್. ಸರ್ಕಾರದ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ಐಎಎಸ್ ನ ಸೂಪರ್ ಟೈಂ ಸ್ಕೇಲ್‌ಗೆ ಸ್ಥಾನಪನ್ನ ಬಡ್ತಿ ನೀಡಿ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಹುದ್ದೆಗೆ ನೇಮಿಸಲಾಗಿರುತ್ತದೆ. ಆದ್ದರಿಂದ ಸರ್ಕಾರದ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ ಹುದ್ದೆಯನ್ನು ಉನ್ನತೀಕರಿಸುವ ಅಗತ್ಯತೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 71 ಸಸಿವಿ 2005, ಬೆಂಗಳೂರು, ದಿನಾಂಕ: 12ನೇ ಡಿಸೆಂಬರ್, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆಯ ಕಾರ್ಯದರ್ಶಿ ಹುದ್ದೆಯನ್ನು ಶ್ರೀ ವಿ.ಪಿ. ಬಾಳಿಗಾರ್, ಐ.ಎ.ಎಸ್. ಇವರು ಕಾರ್ಯ ವರದಿಮಾಡಿಕೊಂಡ ದಿನಾಂಕದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಹುದ್ದೆ ಎಂದು ಉನ್ನತೀಕರಿಸುವುದರೊಂದಿಗೆ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 69 ಅಹಿಸೇ 2003, ದಿನಾಂಕ: 03.07.2003 ರನ್ವಯ ಹೆಚ್ಚುವರಿ ಪೂರಕ ಸಿಬ್ಬಂದಿ ಹುದ್ದೆಗಳನ್ನು ಮಂಜೂರು ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1197 ಸೇ-4/ 2003, ದಿನಾಂಕ: 29.11.2003ರಲ್ಲಿ ನೀಡಿದ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಪಿ. ಪ್ರಭು**
ಪಿ.ಆರ್.1745 ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-2).

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ** : ಜೋಯಿಡಾದ ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿ 1992 ರ ನವೆಂಬರ್‌ನಲ್ಲಿ ನಡೆದ ಮರ ಹರಾಜು ಸಮಯದಲ್ಲಿ ನಡೆಸಿದ್ದರೆನ್ನಲಾದ ಅವ್ಯವಹಾರಗಳಿಗೆ ಸಂಬಂಧಿಸಿದಂತೆ ಉಪ ಅರಣ್ಯ ಸಂರಕ್ಷಣಾಧಿಕಾರಿ ಶ್ರೀ ಎ.ಚನ್ನಬಸಪ್ಪ, ಮತ್ತಿತರರ ವಿರುದ್ಧ ಇಲಾಖಾ ವಿಚಾರಣೆ.

**ಓದಲಾಗಿದೆ** :

1. ಸರ್ಕಾರದ ಆದೇಶ ಸಂ: ಅಪಜೀ 152 ಅಇವಿ 1994, ದಿನಾಂಕ: 30/06/96.
2. ದಿನಾಂಕ: 21/11/96 ರ ನೋಟೀಸ್ ಸಂ: ಅಪಜೀ 152 ಅಇವಿ 94 ರೊಂದಿಗೆ ಶ್ರೀ ಎ.ಚನ್ನಬಸಪ್ಪ, ಉಪ ಅರಣ್ಯ ಸಂರಕ್ಷಣಾಧಿಕಾರಿ, ಶ್ರೀ ಎಸ್.ವಿ.ನಾಯಕ್, ವಲಯ ಅರಣ್ಯಾಧಿಕಾರಿ, ಶ್ರೀ ಮಸ್ಲೇಕರ್, ಅಂದಿನ ದ್ವಿ.ದ.ಸ. ಇವರಿಗೆ ಜಾರಿ ಮಾಡಲಾದ ದೋಷರೋಪಣ ಪಟ್ಟಿ.
3. ಶ್ರೀ ಜಿ.ಜಿ.ಶೆಟ್ಟಿ, ಶ್ರೀ ಎ.ಚನ್ನಬಸಪ್ಪ, ಶ್ರೀ ಎಸ್.ವಿ.ನಾಯಕ್ ಮತ್ತು ಶ್ರೀ ಡಿ.ಎ.ಮಸ್ಲೇಕರ್ ಇವರುಗಳ ಹೇಳಿಕೆ ಕ್ರಮವಾಗಿ ದಿನಾಂಕ: 06/12/96, 18/12/96; 09/12/96 ಮತ್ತು 02/12/96.
4. ಸರ್ಕಾರದ ಆದೇಶ ಸಂ: ಅಪಜೀ 152 ಅಇವಿ 94, ದಿನಾಂಕ: 31/12/97.
5. ಸರ್ಕಾರದ ಆದೇಶ ಸಂ: ಅಪಜೀ 152 ಅಇವಿ 94, ದಿನಾಂಕ: 04/11/2000.
6. ಶ್ರೀ ವಿನಯ ಲೂತ್ರಾ, ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ ಹಾಗೂ ವ್ಯವಸ್ಥಾಪಕ ನಿರ್ದೇಶಕರು, ಜಂಗಲ್ ಲಾಡ್ಜಸ್ ಅಂಡ್ ರಿಸಾರ್ಟ್ಸ್ ಲಿಮಿಟೆಡ್ ಇವರು ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯವರ ಮುಖಾಂತರ ಸಲ್ಲಿಸಿದ ವಿಚಾರಣಾ ವರದಿ ದಿನಾಂಕ: 04/02/2003.
7. ಶ್ರೀ ಎ.ಚನ್ನಬಸಪ್ಪ, ಉಪ ಅರಣ್ಯ ಸಂರಕ್ಷಣಾಧಿಕಾರಿ, ಶ್ರೀ ಜಿ.ಜಿ.ಶೆಟ್ಟಿ, ನಿವೃತ್ತ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಶ್ರೀ ಎಸ್.ವಿ.ನಾಯಕ್, ವಲಯ ಅರಣ್ಯಾಧಿಕಾರಿ ಹಾಗೂ ಶ್ರೀ ಡಿ.ಎ.ಮಸ್ಲೇಕರ್, ಅಂದಿನ ದ್ವಿ.ದ.ಸ ಇವರುಗಳಿಗೆ ಜಾರಿ ಮಾಡಿದ ನೋಟೀಸು ಸಂ: ಅಪಜೀ 152 ಅಇವಿ 94, ದಿನಾಂಕ: 26/2/2005.
8. ಶ್ರೀ ಎ.ಚನ್ನಬಸಪ್ಪ, ಶ್ರೀ ಜಿ.ಜಿ.ಶೆಟ್ಟಿ, ಶ್ರೀ ಎಸ್.ವಿ.ನಾಯಕ್ ಇವರುಗಳ ಹೇಳಿಕೆ ದಿನಾಂಕ ಕ್ರಮವಾಗಿ 13/04/2005, 10/04/2005 ಹಾಗೂ 25/04/2005.
9. ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಮಾಜಿಕ ಅರಣ್ಯ ವಿಭಾಗ, ಕಾರವಾರ ಇವರ ಪತ್ರ ಸಂ: ಎ3/ಸಿಬ್ಬಂದಿ/ಸಿಆರ್–7/2004–05, ದಿನಾಂಕ: 08/04/2005.

ಪ್ರಸ್ತಾವನೆ:

1) ಜೋಯಿಡಾದ ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿ 1992ನೇ ಸಾಲಿನಲ್ಲಿ ನಡೆದ ಮರ ಹರಾಜಿನ ಸಮಯದಲ್ಲಿ ಸೇಲ್ಸ್ ಸ್ಲಿಪ್‌ನಲ್ಲಿ ಅಂಕೆಸಂಖ್ಯೆಗಳನ್ನು ತಿದ್ದಿರುವುದು/ಅಳಿಸಿರುವುದು, ಮೂಲ ಹರಾಜುದಾರರ ಲಾಟುಗಳು ಕಡಿಮೆ ದರಕ್ಕೆ ವಿಲೇವಾರಿಯಾದ ಹರಾಜಿನ ವಿವರಗಳನ್ನು ಹರಾಜು ಪಟ್ಟಿಯಲ್ಲಿ ತಿದ್ದುಪಡಿ ಮಾಡಿರುವುದು ಜೊತೆಗೆ ಬಿಡ್‌ದಾರರ ಜೊತೆ ಸೇರಿ ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟು ಮಾಡಿರುವುದರ ಆರೋಪಗಳ ಮೇಲೆ ಈ ಕೆಳಕಂಡ ಅಧಿಕಾರಿ/ಸಿಬ್ಬಂದಿ ವರ್ಗದವರ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳಲು ಉದ್ದೇಶಿಸಿ, ಮೇಲೆ (1) ಹಾಗೂ (2) ರಲ್ಲಿ ಓದಲಾದ ದಿನಾಂಕಗಳಲ್ಲಿ 1957ರ ಕರ್ನಾಟಕ ನಾಗರಿಕ ಸೇವಾ (ಸಿಸಿಎ) ನಿಯಮಾವಳಿಯ 11 ನೇ ಮತ್ತು 13 ನೇ ನಿಯಮದಡಿ ನೋಟೀಸಿನೊಂದಿಗೆ ದೋಷರೋಪಣ ಪಟ್ಟಿಯನ್ನು ಜಾರಿ ಮಾಡಲಾಗಿತ್ತು.

(1) ಶ್ರೀ ಎ.ಚನ್ನಬಸಪ್ಪ, ಜೋಯಿಡಾ ಸರ್ಕಾರಿ ನಾಟಾ ಸಂಗ್ರಹಾಲಯದ ಅಂದಿನ ಉಪ ಅರಣ್ಯ ಸಂರಕ್ಷಣಾಧಿಕಾರಿ

(2) ಶ್ರೀ ಜಿ.ಜಿ.ಶೆಟ್ಟಿ, ಕಾರವಾರ ಉಪ ವಿಭಾಗದ ಅಂದಿನ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ (ಪ್ರಸ್ತುತ ನಿವೃತ್ತ)

(3) ಶ್ರೀ ಎಸ್.ವಿ.ನಾಯಕ್, ಜೋಯಿಡಾ ನಾಟಾ ಸಂಗ್ರಹಾಲಯದ ಅಂದಿನ ವಲಯ ಅರಣ್ಯಾಧಿಕಾರಿ

(4) ಶ್ರೀ ಡಿ.ಎ.ಮಸ್ಲೇಕರ್, ಕಾರವಾರ ವಿಭಾಗೀಯ ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಕಛೇರಿಯ ಅಂದಿನ ದ್ವಿತೀಯ ದರ್ಜೆ ಸಹಾಯಕ (ಪ್ರಸ್ತುತ ದಿವಂಗತ)

2) ಈ ಆಪಾದಿತ ಅಧಿಕಾರಿಗಳು/ನೌಕರರು ಮೇಲೆ (3) ರಲ್ಲಿ ಓದಲಾದ ದಿನಾಂಕಗಳಲ್ಲಿ ಸಲ್ಲಿಸಿದ ಲಿಖಿತ ರಕ್ಷಣಾ ಹೇಳಿಕೆಯಲ್ಲಿ ಅವರುಗಳ ಮೇಲಿನ ಆರೋಪಗಳನ್ನು ಅಲ್ಲಗಳೆದಿದ್ದರಿಂದ ಈ ಆರೋಪಗಳ ಸತ್ಯಾಸತ್ಯತೆಯನ್ನು ಕಂಡುಹಿಡಿಯಲು 1957 ನೇ ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಯ 11 ಹಾಗೂ 13 ನೇ ನಿಯಮದನ್ವಯ ಇಲಾಖಾ ವಿಚಾರಣೆ ನಡೆಸಲು ಉದ್ದೇಶಿಸಿ, ಮೇಲೆ (4) ರಲ್ಲಿ ಓದಲಾದ ದಿನಾಂಕ: 31/12/97ರ ಆದೇಶದಲ್ಲಿ ಶಿರಸಿಯ ಕೆನರಾ ವೃತ್ತದ ಅರಣ್ಯ ಸಂರಕ್ಷಣಾಧಿಕಾರಿರವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು ಜೋಯಿಡಾದ ನಾಟಾ ಸಂಗ್ರಹಾಲಯದ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿರವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

3) ವಿಚಾರಣಾಧಿಕಾರಿಗಳು ದಿನಾಂಕ: 31/09/2000 ರಂದು ವಿಚಾರಣಾ ವರದಿಯನ್ನು ಸಲ್ಲಿಸುತ್ತಾ, ಆಪಾದಿತರ ಮೇಲೆ ಮಾಡಲಾದ ಆರೋಪಗಳು ರುಜುವಾತಾಗಿಲ್ಲವೆಂದು ನಿರ್ಣಯಿಸಿದ್ದರು. ವಿಚಾರಣಾಧಿಕಾರಿಗಳು ಸಲ್ಲಿಸಿದ ವಿಚಾರಣೆ ವರದಿಯನ್ನು ಪರಿಶೀಲಿಸಿದಾಗ ಶಿಸ್ತು ಪ್ರಾಧಿಕಾರಿಯ ಪರವಾಗಿ 9 ಸಾಕ್ಷಿಧಾರರನ್ನು ಅನುಬಂಧ–4 ರಲ್ಲಿ ಹೆಸರಿಸಿದ್ದು, ಈ ಪೈಕಿ ಐವರು ಖಾಸಗಿ ವ್ಯಕ್ತಿಗಳಾಗಿದ್ದು, ನಾಲ್ವರು ಸರ್ಕಾರಿ ನೌಕರರಾಗಿರುತ್ತಾರೆ. ಸರ್ಕಾರಿ ನೌಕರರಲ್ಲಿ ಒಬ್ಬರು ಮೃತ ಪಟ್ಟಿರುತ್ತಾರೆ. ಅಂದರೆ ಉಳಿದ 8 ಸಾಕ್ಷಿಧಾರರ ಪೈಕಿ ಒಬ್ಬರು ಮಾತ್ರ ಸಾಕ್ಷಿ ಹೇಳಿಕೆ ನೀಡಿರುತ್ತಾರೆ. ಈ ಪ್ರಕರಣದಲ್ಲಿ ಮುಖ್ಯ ಸಾಕ್ಷಿಧಾರರಾದ ಶ್ರೀ ಡಿ.ಎ.ವೆಂಕಟೇಶ್, ಭಾಅಸೇ ಇವರಿಗೆ ವಿಚಾರಣೆಗೆ ಹಾಜರಾಗುವಂತೆ ವಿಚಾರಣಾಧಿಕಾರಿಯವರು ಹತ್ತು ಬಾರಿ ನೋಟೀಸನ್ನು ಜಾರಿ ಮಾಡಿದ್ದರೂ ಸಹ ಇವರು ವಿಚಾರಣೆಗೆ ಹಾಜರಾಗಿ ಸಾಕ್ಷಿ ಹೇಳಲು ವಿಫಲರಾಗಿರುವುದರಿಂದ ನಿಯಮಾವಳಿಯನ್ವಯ ಪ್ರಕರಣಕ್ಕೆ ಸಂಬಂಧಿಸಿದ ದಾಖಲೆಗಳನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡನಾಧಿಕಾರಿಯವರು ಮಂಡಿಸಲು ಸಾಧ್ಯವಾಗದ ಕಾರಣ ಆರೋಪಗಳನ್ನು ರುಜುವಾತುಪಡಿಸಲು ಸಾಧ್ಯವಾಗಿರುವುದಿಲ್ಲ. ಇದರಿಂದ ಇಡೀ ಇಲಾಖಾ ವಿಚಾರಣಾ ಪ್ರಕ್ರಿಯೆಯೇ ನಿಷ್ಕ್ರಿಯವಾಗುವುದನ್ನು ಮನಗಂಡ ಸರ್ಕಾರವು ಮೇಲೆ (5) ರಲ್ಲಿ ಓದಲಾದ ದಿನಾಂಕ: 04/11/2000 ರ ಆದೇಶದಲ್ಲಿ 1957 ನೇ ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಯ 11–ಎ ನಿಯಮದನ್ವಯ ಮುಂದುವರೆದ ವಿಚಾರಣೆ ನಡೆಸಲು ಆದೇಶಿಸಲಾಗಿತ್ತು. ಈ ಮುಂದುವರೆದ ವಿಚಾರಣೆಯನ್ನು ನಡೆಸಲು ಅರಣ್ಯ ಸಂರಕ್ಷಣಾಧಿಕಾರಿ, ಕೆನರಾ ವೃತ್ತ, ಶಿರಸಿ ಇವರನ್ನು ವಿಚಾರಣಾಧಿಕಾರಿಯಾಗಿ ಹಾಗೂ ಜೋಯಿಡಾದ ಸರ್ಕಾರಿ ಮರ ಸಂಗ್ರಹಾಲಯದ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿರವರನ್ನು ಮಂಡನಾಧಿಕಾರಿಯನ್ನಾಗಿ ಮುಂದುವರೆಯಲು ಆದೇಶಿಸಲಾಗಿತ್ತು.

4) ಮೇಲೆ (6) ರಲ್ಲಿ ಓದಲಾದ ಪತ್ರದೊಂದಿಗೆ ವಿಚಾರಣಾಧಿಕಾರಿಯವರು ವಿಚಾರಣಾ ವರದಿಯನ್ನು ಸಲ್ಲಿಸುತ್ತಾ, 3ನೇ ಪ್ರಾಸಿಕ್ಯೂಷನ್ ಸಾಕ್ಷಿದಾರರಾದ ಶ್ರೀ ಡಿ.ಎ.ವೆಂಕಟೇಶ್‌ರವರು ಸಾಕ್ಷಿ ಹೇಳಿರುವುದನ್ನು ಹೊರತು ಪಡಿಸಿದರೆ ಉಳಿದ ಯಾವುದೇ ಸಾಕ್ಷಿದಾರರು ಸಾಕ್ಷ್ಯ ಹೇಳಲು ವಿಫಲರಾಗಿರುತ್ತಾರೆ. ಮಂಡನಾಧಿಕಾರಿಯವರೂ ಸಹ ದೋಷಾರೋಪಣಾ ಪಟ್ಟಿಯಲ್ಲಿ ನಮೂದಿಸಿರುವ ದಾಖಲೆಗಳನ್ನು ವಿಚಾರಣೆಗೆ ಹಾಜರುಪಡಿಸದೇ ಕೇವಲ ಕೆನರಾ ವೃತ್ತದ ಅರಣ್ಯ ಸಂರಕ್ಷಣಾಧಿಕಾರಿ ಸಲ್ಲಿಸಿದ ತನಿಖಾ ವರದಿಯ ಆಧಾರದ ಮೇಲೆ ತಮ್ಮ ವಾದವನ್ನು ಮಂಡಿಸುತ್ತಾ 4 ಆರೋಪಿಗಳು ಒಳಸಂಚು ನಡೆಸಿ ಅವ್ಯವಹಾರವೆಸಗಿದ್ದಾರೆಂದು ವಾದ ಮಂಡಿಸಿದ್ದು, ಇದಕ್ಕೆ ಪೂರಕವಾಗಿ ಯಾವುದೇ ಆದೇಶ ಅಥವಾ ದಾಖಲೆಗಳನ್ನು ಮಂಡಿಸಿಲ್ಲವೆಂದು; ದಾಖಲೆಗಳ ಹಾಗೂ ಪ್ರಾಸಿಕ್ಯೂಷನ್ ಸಾಕ್ಷಿದಾರರಿಂದ ಸಾಕ್ಷಿಪುರಾವೆಗಳ ಅನುಪಸ್ಥಿತಿಯಲ್ಲಿ ಮಂಡನಾಧಿಕಾರಿಯವರ ವಾದವನ್ನು ಒಪ್ಪಲು ಸಾಧ್ಯವಿಲ್ಲವಾದ್ದರಿಂದ 4 ಆಪಾದಿತರ ವಿರುದ್ಧ ಮಾಡಲಾದ ಆರೋಪಗಳು ಸಾಬೀತಾಗಿಲ್ಲವೆಂದು ನಿರ್ಣಯಿಸಿರುತ್ತಾರೆ.

5) ಈ ಪ್ರಕರಣಕ್ಕೆ ಪೂರಕವಾಗಿ ಸಾಕಷ್ಟು ಪ್ರಬಲವಾದ ದಾಖಲೆಗಳಿದ್ದರೂ ಸಹ ಅದನ್ನು ವಿಚಾರಣಾಧಿಕಾರಿಯವರ ಮುಂದೆ ಹಾಜರುಪಡಿಸದೆ ಹಾಗೂ ಸಾಕ್ಷಿಧಾರರನ್ನು ವಿಚಾರಣೆಗೆ ಹಾಜರುಪಡಿಸಿ ಅವರಿಂದ ಸಾಕ್ಷಿ ಹೇಳಿಕೆಯನ್ನು ಪಡೆಯದೆ ಆರೋಪಿಗಳು ಆರೋಪದಿಂದ ಮುಕ್ತರಾಗಲು ಅವಕಾಶ ಕಲ್ಪಿಸಿರುವುದು ಸ್ಪಷ್ಟವಾಗಿರುತ್ತದೆ. ವಿಚಾರಣಾಧಿಕಾರಿಯವರ ಈ ವರದಿಯನ್ನು ಅಂಗೀಕರಿಸಿದಲ್ಲಿ ಸರ್ಕಾರಕ್ಕೆ ಲಕ್ಷಾಂತರ ರೂಪಾಯಿಗಳ ಆರ್ಥಿಕ ನಷ್ಟ ಉಂಟುಮಾಡಿದ ಆಪಾದಿತರು ತಪ್ಪಿಸಿಕೊಳ್ಳುವ ಸಾಧ್ಯತೆ ಇರುವುದರ ಜೊತೆಗೆ ಇಂತಹ ಪ್ರಕರಣಗಳು ಮರುಕಳಿಸುವ ಸಾಧ್ಯತೆ ಇರುತ್ತದೆ.

6) ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಈ ಕೆಳಕಂಡ ಅತ್ಯಂತ ಪ್ರಮುಖ ದಾಖಲೆಗಳನ್ನು ಹಾಗೂ ಸಾಕ್ಷಿದಾರರನ್ನು ಆಪಾದಿತರಿಗೆ ಜಾರಿ ಮಾಡಲಾದ ದೋಷಾರೋಪಣ ಪಟ್ಟಿಯಲ್ಲಿ ಸೇರ್ಪಡೆಗೊಳಿಸದೆ ಇದ್ದುದರಿಂದ ದೋಷರೋಪಣ

ಪಟ್ಟಿಯು ಪರಿಪೂರ್ಣವಾಗಿರಲಿಲ್ಲ.. ಆರೋಪವನ್ನು ಸಾಬೀತುಪಡಿಸಲು ಸಾಕಷ್ಟು ರುಜುವಾತುಗಳಿರುವುದರಿಂದ ಈ ದಾಖಲೆ/ಸಾಕ್ಷಿದಾರರನ್ನು ದೋಷರೋಪಣ ಪಟ್ಟಿಯಲ್ಲಿ ಅಳವಡಿಸಲು ಸರ್ಕಾರವು ನಿರ್ಧರಿಸಿದೆ:–

**ನೋಟೀಸ್‌ನ ಅನುಬಂಧ–3:**

- ಶ್ರೀ ಆರ್.ಎಂ.ರೇ, ಭಾಅಸೇ ಅಂದಿನ ಅರಣ್ಯ ಸಂರಕ್ಷಣಾಧಿಕಾರಿ, ಕೆನರಾ ವೃತ್ತ, ಸಿರ್ಸಿ ಇವರು ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯವರಿಗೆ ಬರೆದ ಪತ್ರ ಸಂ: ಬಿ1/ಸಿಆರ್–2/ ಡಿಟಿಎಸ್/ 92–93, ದಿನಾಂಕ: 02/01/93.
- ಶ್ರೀ ಎ.ಕೆ.ವರ್ಮ, ಭಾಅಸೇ, ಅಂದಿನ ಅರಣ್ಯ ಸಂರಕ್ಷಣಾಧಿಕಾರಿ (ಜಾಗೃತ) ಇವರು ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯವರಿಗೆ ಬರೆದ ಪತ್ರ ಸಂ: ಇ3/ವಿಐಜಿ/ಸಿಆರ್–1/92/93, ದಿನಾಂಕ: 04/09/93.

**ನೋಟೀಸ್‌ನ ಅನುಬಂಧ–4:**

- ಶ್ರೀ ಆರ್.ಎಂ.ರೇ, ಭಾಅಸೇ ಅಂದಿನ ಅರಣ್ಯ ಸಂರಕ್ಷಣಾಧಿಕಾರಿ, ಕೆನರಾ ವೃತ್ತ ಸಿರ್ಸಿ, ಪ್ರಸ್ತುತ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ.
- ಶ್ರೀ ಎ.ಕೆ.ವರ್ಮ, ಭಾಅಸೇ ಅಂದಿನ ಅರಣ್ಯ ಸಂರಕ್ಷಣಾಧಿಕಾರಿ (ಜಾಗೃತ) ಪ್ರಸ್ತುತ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ವನ್ಯಜೀವಿ)
- ಶ್ರೀ ಬಿ.ಎಸ್.ಹೆಗಡೆ, ಅಂದಿನ ಅಧೀಕ್ಷಕರು ಅರಣ್ಯ ಸಂರಕ್ಷಣಾಧಿಕಾರಿಯವರ ಕಛೇರಿ, ಕೆನರಾ ವೃತ್ತ, ಸಿರ್ಸಿ.

7) ಆದುದರಿಂದ ಮೇಲ್ಕಂಡ ಹೆಚ್ಚುವರಿ ದಾಖಲೆ ಹಾಗೂ ಸಾಕ್ಷಿದಾರರನ್ನು ದೋಷರೋಪಣ ಪಟ್ಟಿಯ ಅನುಬಂಧ–3 ಹಾಗೂ 4 ರಲ್ಲಿ ಸೇರ್ಪಡೆಗೊಳಿಸಿ ಮುಂದುವರೆದ ವಿಚಾರಣೆಯನ್ನು ನಡೆಸಲು ಸರ್ಕಾರವು ತೀರ್ಮಾನಿಸಿ, ಸ್ವಾಭಾವಿಕ ತತ್ವಗಳನ್ವಯ ಆಪಾದಿತರಿಗೆ ಒಂದು ಅವಕಾಶವನ್ನು ನೀಡುವ ಸಲುವಾಗಿ ಮೇಲೆ (7) ರಲ್ಲಿ ಓದಲಾದ ದಿನಾಂಕ: 26/02/2005 ರ ನೋಟೀಸನ್ನು ಜಾರಿ ಮಾಡಿ ಅವರ ಹೇಳಿಕೆಗಳು ಏನಾದರು ಇದ್ದಲ್ಲಿ ಲಿಖಿತವಾಗಿ ಸರ್ಕಾರಕ್ಕೆ ಸಲ್ಲಿಸುವಂತೆ ಸೂಚಿಸಲಾಗಿತ್ತು. ಈ ನೋಟೀಸಿಗೆ ಶ್ರೀ ಡಿ.ಎ.ಮಸ್ಲೇಕರ್ ರವರನ್ನು ಹೊರತುಪಡಿಸಿ ಉಳಿದ ಎಲ್ಲಾ ಆಪಾದಿತರು ಮೇಲೆ (8) ರಲ್ಲಿ ಓದಲಾದ ದಿನಾಂಕಗಳಲ್ಲಿ ತಮ್ಮ ಹೇಳಿಕೆಯನ್ನು ಸಲ್ಲಿಸುತ್ತಾ, ಪ್ರಸ್ತಾವಿತ ಸರ್ಕಾರದ ಕ್ರಮವನ್ನು ಕೈಬಿಟ್ಟು ತಮ್ಮನ್ನು ಆರೋಪಮುಕ್ತರನ್ನಾಗಿಸುವಂತೆ ಕೋರಿರುತ್ತಾರೆ. ಆದರೆ ಅವರುಗಳು ನೀಡಿರುವ ಸಮಜಾಯುಷಿಕೆಯನ್ನು ಒಪ್ಪಲು ಯಾವುದೇ ಹೊಸ ಕಾರಣಗಳಾಗಲೀ ಅಥವಾ ಸಮರ್ಥನೀಯ ಅಂಶವಾಗಲೀ ಇಲ್ಲದ ಕಾರಣ ಇವರ ಸಮಜಾಯುಷಿಕೆಯನ್ನು ತಳ್ಳಿಹಾಕಿ 1957 ನೇ ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಯ 11–ಎ ನಿಯಮದನ್ವಯ ಮುಂದುವರೆದ ಇಲಾಖಾ ವಿಚಾರಣೆಯನ್ನು ಸರ್ಕಾರವು ನಿರ್ಧರಿಸಿದೆ.

8) ಮೇಲೆ (9) ರಲ್ಲಿ ಓದಲಾದ ದಿನಾಂಕ: 08/04/2005 ರ ಪತ್ರದಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿ, ಜಿಲ್ಲಾ ಪಂಚಾಯತ್, ಕಾರವಾರ ಇವರು ಶ್ರೀ ಡಿ.ಎ.ಮಸ್ಲೇಕರ್, ಪ್ರಥಮ ದರ್ಜೆ ಸಹಾಯಕರು ಇವರು ದಿನಾಂಕ: 28/08/2004 ರಂದು ನಿಧನ ಹೊಂದಿರುತ್ತಾರೆಂದು ತಿಳಿಸುತ್ತಾ, ಇದಕ್ಕೆ ಪೂರಕವಾಗಿ ದೃಢೀಕೃತ ಮರಣ ಪ್ರಮಾಣ ಪತ್ರವನ್ನು ಸಲ್ಲಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ ನಿಧನರಾದ ಈ ಆಪಾದಿತರ ವಿರುದ್ಧ ವಿಚಾರಣೆಯನ್ನು ಮುಂದುವರೆಸುವುದು ಸೂಕ್ತವಲ್ಲವೆಂದು ಸರ್ಕಾರವು ಭಾವಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂ: ಅಪಜೀ 152 ಅಇವಿ 1994, ಬೆಂಗಳೂರು, ದಿನಾಂಕ:22ನೇ ನವೆಂಬರ್, 2005**

9) 1957 ರ ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಯ 11–ಎ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಪ್ರಸ್ತಾವನೆಯ ಕಂಡಿಕೆ–6 ರಲ್ಲಿ ನಮೂದಿಸಿರುವ ಹೆಚ್ಚುವರಿ ದಾಖಲೆ ಹಾಗೂ ಸಾಕ್ಷಿದಾರರನ್ನು ದೋಷರೋಪಣ ಪಟ್ಟಿಯ ಅನುಬಂಧ–3 ಹಾಗೂ 4 ರಲ್ಲಿ ಸೇರ್ಪಡೆಗೊಳಿಸಿ ಈ ಕೆಳಕಂಡ ಅಧಿಕಾರಿ/ನೌಕರರ ವಿರುದ್ಧ ಮುಂದುವರೆದ ವಿಚಾರಣೆ ನಡೆಸಲು ಆದೇಶಿಸಲಾಗಿದೆ:–

(1) ಶ್ರೀ ಎ.ಚನ್ನಬಸಪ್ಪ, ಜೋಯಿಡಾ ಸರ್ಕಾರಿ ನಾಟಾ ಸಂಗ್ರಹಾಲಯದ ಅಂದಿನ ಉಪ ಅರಣ್ಯ ಸಂರಕ್ಷಣಾಧಿಕಾರಿ.

(2) ಶ್ರೀ ಜಿ.ಜಿ.ಶೆಟ್ಟಿ, ಕಾರವಾರ ಉಪ ವಿಭಾಗದ ಅಂದಿನ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ (ಪ್ರಸ್ತುತ ನಿವೃತ್ತ).

(3) ಶ್ರೀ ಎಸ್.ವಿ.ನಾಯಕ್, ಜೋಯಿಡಾ ನಾಟಾ ಸಂಗ್ರಹಾಲಯದ ಅಂದಿನ ವಲಯ ಅರಣ್ಯಾಧಿಕಾರಿ.

10) ಈ ಮುಂದುವರೆದ ವಿಚಾರಣೆಯನ್ನು ನಡೆಸಲು **ಶ್ರೀ ಜಿ.ಸತೀಶ್, ಭಾಅಸೇ ಅರಣ್ಯ ಸಂರಕ್ಷಣಾಧಿಕಾರಿ, ಕೆನರಾ ವೃತ್ತ, ಸಿರ್ಸಿ ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಶ್ರೀ ರಾಜಗೋಪಾಲ ಶೆಟ್ಟಿ, ಉಪ ಅರಣ್ಯ ಸಂರಕ್ಷಣಾಧಿಕಾರಿ ಹಾಗೂ ಪ್ರಾದೇಶಿಕ ನಿರ್ದೇಶಕರು, ಕರ್ನಾಟಕ ಗೇರು ಅಭಿವೃದ್ಧಿ ನಿಗಮ ನಿಯಮಿತ, ಪುತ್ತೂರು ಇವರನ್ನು ಮಂಡನಾಧಿಕಾರಿಯನ್ನಾಗಿ** 1957 ನೇ ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಯ 11(2) ಮತ್ತು 11(5)(ಸಿ) ನಿಯಮದಡಿ ನೇಮಿಸಲಾಗಿದೆ.

11) ಈ ವಿಚಾರಣೆಯನ್ನು ಮೂರು ತಿಂಗಳೊಳಗಾಗಿ ಮುಕ್ತಾಯಗೊಳಿಸಿ ಸರ್ಕಾರಕ್ಕೆ ವಿಚಾರಣಾ ವರದಿಯನ್ನು ಸಲ್ಲಿಸುವಂತೆ ಸೂಚಿಸಲಾಗಿದೆ.

12) ಆಪಾದಿತರಲ್ಲೊಬ್ಬರಾದ ಶ್ರೀ ಡಿ.ಎ.ಮಸ್ಲೇಕರ್, ಕಾರವಾರ ವಿಭಾಗೀಯ ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಕಛೇರಿಯ ಅಂದಿನ ದ್ವಿತೀಯ ದರ್ಜೆ ಸಹಾಯಕರಾಗಿದ್ದು ನಿಧನ ಹೊಂದಿರುವುದರಿಂದ ಇವರನ್ನು ಈ ಪ್ರಕರಣದಿಂದ ದೋಷಮುಕ್ತರನ್ನಾಗಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ನಾಗರಾಜು**

ಪಿ.ಆರ್.1698

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ (ಸೇವೆಗಳು).

ಕಂದಾಯ ಸಚಿವಾಲಯ

**ವಿಷಯ:** ಶ್ರೀ ಎಂ.ಎಲ್.ಮಹದೇವಯ್ಯ, ಹಿಂದಿನ ತಹಸೀಲ್ದಾರ್, ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ, ಹಾಲಿ ನಿವೃತ್ತರು ಇವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸುವ ಬಗ್ಗೆ.

**ಓದಲಾಗಿದೆ:**
1. ಚಿತ್ರದುರ್ಗ ಜಿಲ್ಲಾಧಿಕಾರಿಯವರ ದಿನಾಂಕ:06-12-2004ರ ಪತ್ರ ಸಂಖ್ಯೆ:ಪುರಸಭೆ(1), ಸಿಆರ್/546/ 2001-02.
2. ದಿನಾಂಕ:31-3-2005ರ ಕಾರಣ ಕೇಳುವ ನೋಟೀಸು ಸಂಖ್ಯೆ:ಕಂಇ 12 ಎಡಿಇ 2005.
3. ಶ್ರೀ ಎಂ.ಎಲ್.ಮಹದೇವಯ್ಯ ಇವರ ದಿನಾಂಕ:05-04-2005ರ ಲಿಖಿತ ಉತ್ತರ.
4. ದಿನಾಂಕ:27-5-2005ರ ಸರ್ಕಾರಿ ಪತ್ರ ಸಂಖ್ಯೆ:ಕಂಇ 12 ಎಡಿಇ 2005.

**ಪ್ರಸ್ತಾವನೆ:**

ಶ್ರೀ ಎಂ.ಎಲ್.ಮಹದೇವಯ್ಯ, ಹಿಂದಿನ ತಹಸೀಲ್ದಾರ್, ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ, ಹಾಲಿ ನಿವೃತ್ತರು ಇವರು ಸದರಿ ತಾಲ್ಲೂಕಿನಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಚಳ್ಳಕೆರೆ ಪಟ್ಟಣದ ಶ್ರೀ ಎಸ್.ಜೆ.ವೆಂಕಟೇಶ್ ಬಿನ್ ಎಸ್.ಜಯಣ್ಣ ಎಂಬುವವರಿಗೆ ಕಾನೂನುಬಾಹಿರವಾಗಿ ಜಾತಿ ದೃಢೀಕರಣ ಪತ್ರವನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ:ಯುಡಿಡಿ 113 ಎಂಎಲ್ಆರ್ 2001, ದಿ:1-12-2001 ರನ್ವಯ ಮತ್ತು ಸರ್ಕಾರದ ಸುತ್ತೋಲೆ ಸಂಖ್ಯೆ:ಎಸ್‌ಡಬ್ಲ್ಯೂಡಿ 150 ಬಿಸಿಎ 94, ದಿ:17-7-94 ಹಾಗೂ ಆರ್‌ಡಿಸಿ 5 ಝಡ್‌ಪಿಎಸ್ 95/1, ದಿನಾಂಕ:13-1-95ರ ಕರ್ನಾಟಕ ರಾಜ್ಯಪತ್ರದಲ್ಲಿನ ಆದೇಶವನ್ನು ಉಲ್ಲಂಘಿಸಿ ಅವರ ಅಧಿಕಾರವ್ಯಾಪ್ತಿ ಮೀರಿ ದಿನಾಂಕ:7-12-2001ರಂದು ``ಹಿಂದೂ ಜೈನ`` ಜಾತಿ ಸೇರಿದ ವ್ಯಕ್ತಿಯೊಬ್ಬರಿಗೆ ``ಬೋಗಾರ`` ಎಂದು ಜಾತಿ ದೃಢೀಕರಣ ಪತ್ರವನ್ನು ಸದರಿ ವ್ಯಕ್ತಿಗೆ ಅರ್ಹತೆ ಇಲ್ಲದೇ ಇದ್ದರೂ ಸಹ ನೀಡಿರುವರೆಂಬ ಕಾರಣಕ್ಕಾಗಿ ಇವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸುವಂತೆ ಮೇಲೆ ಕ್ರಮಸಂಖ್ಯೆ (1) ರಲ್ಲಿ ಓದಲಾದ ದಿ:6-12-2004ರ ಪತ್ರದಲ್ಲಿ ಚಿತ್ರದುರ್ಗ ಜಿಲ್ಲಾಧಿಕಾರಿಯವರು ಸರ್ಕಾರವನ್ನು ಕೋರಿರುತ್ತಾರೆ. ಸದರಿ ಅಧಿಕಾರಿಯ ವಿರುದ್ಧದ ದೋಷಾರೋಪಣಾ ಪಟ್ಟಿಗಳನ್ನು ಅನುಬಂಧ 1ರಿಂದ 4ರ ವರೆಗೆ ಮೇಲೆ ಕ್ರಮ ಸಂಖ್ಯೆ(2)ರಲ್ಲಿ ಓದಲಾದ ಕಾರಣ ಕೇಳುವ ನೋಟೀಸಿನೊಂದಿಗೆ ಜಾರಿಗೊಳಿಸಿ ಅದಕ್ಕೆ ಅವರ ಲಿಖಿತ ಉತ್ತರವನ್ನು ಸಲ್ಲಿಸುವಂತೆ ಸೂಚಿಸಲಾಗಿತ್ತು. ಅದಕ್ಕೆ ಉತ್ತರವಾಗಿ ಶ್ರೀ ಎಂ.ಎಲ್.ಮಹದೇವಯ್ಯ ಇವರು ಮೇಲೆ ಕ್ರಮ ಸಂಖ್ಯೆ(3)ರಲ್ಲಿ ಓದಲಾದ ದಿನಾಂಕ: 5-4-2005ರ ತಮ್ಮ ಲಿಖಿತ ಉತ್ತರದಲ್ಲಿ ಅನುಬಂಧ-3ರಲ್ಲಿ ನಮೂದಿಸಲಾಗಿರುವ ದಾಖಲೆಗಳನ್ನು ಒದಗಿಸುವಂತೆ ಹಾಗೂ ಅವರ ಲಿಖಿತ ಉತ್ತರವನ್ನು ಸಲ್ಲಿಸಲು ಇನ್ನೂ 10 ದಿನಗಳ ಗಡುವನ್ನು ವಿಸ್ತರಿಸುವಂತೆ ಕೋರಿದ್ದರ ಮೇರೆಗೆ ಮೇಲೆ ಕ್ರಮ ಸಂಖ್ಯೆ(4) ರಲ್ಲಿ ಓದಲಾಗಿರುವ ದಿನಾಂಕ:27-5-2005ರ ಪತ್ರದೊಂದಿಗೆ ಅನುಬಂಧ-3ರ ದಾಖಲೆಗಳ ಜೆರಾಕ್ಸ್ ಪ್ರತಿ ಗಳನ್ನು ಕಳುಹಿಸಿ ಅವರ ಕೋರಿಕೆಯಂತೆ ಲಿಖಿತ ಉತ್ತರವನ್ನು ಸಲ್ಲಿಸಲು ಸದರಿ ದಿನಾಂಕದಿಂದ 10 ದಿನಗಳ ಕಾಲಾವಕಾಶವನ್ನು ವಿಸ್ತರಿಸಲಾಗಿತ್ತು. ಆದರೆ ಸದರಿ ನಿವೃತ್ತ ಅಧಿಕಾರಿ ವಿಸ್ತರಿಸಿದ ಗಡುವು ಮೀರಿದ ನಂತರವೂ ಸಹ ಅವರ ಲಿಖಿತ ಉತ್ತರವನ್ನು ಸರ್ಕಾರಕ್ಕೆ ಸಲ್ಲಿಸಿರುವುದಿಲ್ಲ. ಆದುದರಿಂದ ದಿನಾಂಕ:31-3-2005ರ ಕಾರಣ ಕೇಳುವ ನೋಟೀಸಿನಲ್ಲಿ ಸ್ಪಷ್ಟಪಡಿಸಿರುವಂತೆ ನಿಗದಿತ ಅವಧಿಯೊಳಗೆ ತಮ್ಮ ಲಿಖಿತ ಹೇಳಿಕೆಯನ್ನು ಸರ್ಕಾರಕ್ಕೆ ಸಲ್ಲಿಸದಿದ್ದಲ್ಲಿ ಅವರ ವಿರುದ್ಧದ ಅರೋಪಗಳ ಬಗ್ಗೆ ಏಕಪಕ್ಷೀಯವಾಗಿ ಮುಂದಿನ ಕ್ರಮ ಕೈಗೊಳ್ಳಲಾಗುವುದು ಎಂದು ಸೂಚಿಸಿರುವ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 12 ಎಡಿಇ 2005, ಬೆಂಗಳೂರು, ದಿನಾಂಕ: 14ನೇ ನವೆಂಬರ್, 2005**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿರುವ ಹಿನ್ನೆಲೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11 ರಡಿಯಲ್ಲಿ ಹಾಗೂ ಶ್ರೀ ಎಂ.ಎಲ್.ಮಹದೇವಯ್ಯ, ಹಿಂದಿನ ತಹಸೀಲ್ದಾರ್, ಚಳ್ಳಕೆರೆತಾಲ್ಲೂಕು, ಚಿತ್ರದುರ್ಗ ಜಿಲ್ಲೆ, ಇವರು ಸೇವೆಯಿಂದ ಹಾಲಿ ನಿವೃತ್ತರಾಗಿರುವುದರಿಂದ ಇವರ ವಿರುದ್ಧದ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ಜರುಗಿಸಲು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಎಸ್.ಸಿ.ಲಕ್ಷ್ಮೀನರಸಿಂಹಯ್ಯ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ನಂ.643, 10ನೇ ಮುಖ್ಯ ರಸ್ತೆ, 6ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು-10 ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ,ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಚಿತ್ರದುರ್ಗ ಜಿಲ್ಲಾಧಿಕಾರಿಗಳ ಕಛೇರಿಯ ಕೇಂದ್ರಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ಬೆಂಗಳೂರು ನಗರ ಜಿಲ್ಲಾಧಿಕಾರಿಗಳ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗಧಿ ಪಡಿಸಿದ ಸ್ಥಳದಲ್ಲಿ ಇಲಾಖಾ ವಿಚಾರಣೆಯನ್ನು ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ಮಾಡುವುದು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ/ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಗ್ರಿಗಳನ್ನು ಒದಗಿಸತಕ್ಕದ್ದು.

ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ರೂ.5000/-(ಐದು ಸಾವಿರ ರೂಪಾಯಿ ಗಳು ಮಾತ್ರ) ಸಂಚಿತ ಸಂಭಾವನೆಯನ್ನು ಹಾಗೂ ದಿನಾಂಕ:4-3-2002ರ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 45 ಸೇಇವಿ 2001 ರನ್ವಯ 1000/-(ಒಂದು ಸಾವಿರ ರೂಪಾಯಿಗಳು ಮಾತ್ರ) ರೂ.ಗಳ ವಾಹನ ಭತ್ಯೆ(ಕನ್ವೇಯನ್ಸ್ ಅಲೋಯೆನ್ಸ್)ನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಚಿತ್ರದುರ್ಗ ಜಿಲ್ಲಾಧಿಕಾರಿಗಳು ಪಾವತಿ ಮಾಡತಕ್ಕದ್ದು.

ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣೆಯನ್ನು ಜರುಗಿಸಿ ವಿಚಾರಣಾ ವರದಿಯನ್ನು ಎರಡು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಮಹಂತೇಶಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು–3).

ಪಿ.ಆರ್.1667

**ವಿಷಯ:** ಶ್ರೀ ಸಿ.ಜಿ.ಪಾಟೀಲ್, ಹಿಂದಿನ ತಹಸೀಲ್ದಾರ್, ಚಿಕ್ಕೋಡಿ ತಾಲ್ಲೂಕು ಬೆಳಗಾಂ ಜಿಲ್ಲೆ, ಹಾಲಿ ನಿವೃತ್ತರು ಇವರನ್ನು ಉದ್ದೇಶಿತ ಶಿಸ್ತು ಕ್ರಮ ದಿಂದ ಕೈಬಿಡುವ ಬಗ್ಗೆ.

**ಓದಲಾಗಿದೆ:**
1. ಬೆಳಗಾಂ ಜಿಲ್ಲಾಧಿಕಾರಿಯವರು ದಿನಾಂಕ:23-4-2002ರ ಅ.ಸ.ಪತ್ರ ಸಂಖ್ಯೆ:ಆರ್.ಬಿ/ಇಎಸ್‌ಟಿ/1/ಸಿಆರ್-193/2001-02 ಮತ್ತು ದಿ:28-4-2005ರ ಪತ್ರ ಸಂಖ್ಯೆ:ಕಂಶಾ/ಸಿಬ್ಬಂದಿ-1/ವಿವ-193/01-02.
2. ದಿ:27-5-2005ರ ಕಾರಣ ಕೇಳುವ ನೋಟೀಸು ಸಂಖ್ಯೆ:ಆರ್‌ಡಿ 22 ಎಡಿಇ 2002.
3. ಶ್ರೀ ಸಿ.ಜಿ.ಪಾಟೀಲ್, ನಿವೃತ್ತ ತಹಸೀಲ್ದಾರ್ ಇವರ ದಿ:16-6-2005ರ ಲಿಖಿತ ಉತ್ತರ.

ಪ್ರಸ್ತಾವನೆ:

ಶ್ರೀ ಸಿ.ಜಿ.ಪಾಟೀಲ್, ಹಿಂದಿನ ತಹಸೀಲ್ದಾರ್, ಚಿಕ್ಕೋಡಿ ತಾಲ್ಲೂಕು, ಬೆಳಗಾಂ ಜಿಲ್ಲೆ, ಹಾಲಿ ನಿವೃತ್ತರು ಇವರು ಸದರಿ ತಾಲ್ಲೂಕಿನಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕೆರೂರು ಗ್ರಾಮದ ರಿ.ಸರ್ವೆ.ನಂ. 559, 560, 660 ಮತ್ತು 679 ಇವುಗಳ ಪೈಕಿ ಶ್ರೀಮತಿ ಬಾಯಕ್ಕ ಕಲ್ಲಗೌಡಪಾಟೀಲ್ ಇವರ 1/3 ಹಿಸ್ಸಾದ ಜಮೀನು ರೈತಾವಾ ಮಾಡುವ ಕುರಿತು ಶ್ರೀ ಕೃಷ್ಣಪ್ಪ ಖೋತಾ ಇವರು ಸಲ್ಲಿಸಿದ್ದ ಅರ್ಜಿಯ ಮೇರೆಗೆ ದಿನಾಂಕ:12-4-2001ರಂದು ಶ್ರೀ ಸಿ.ಜಿ.ಪಾಟೀಲ್ ರವರು ರೈತಾವಾ ಆದೇಶ ನೀಡಿರುತ್ತಾರೆ. ಸದರಿ ಆದೇಶದಂತೆ ದಿನಾಂಕ:28-4-2001 ರಂದು ಹಕ್ಕು ದಾಖಲೆ ನಂ.1986 ಎಂದು ದಾಖಲಾಗಿರುತ್ತದೆ. ಕಂದಾಯ ನಿರೀಕ್ಷಕರು, ಚಿಕ್ಕೋಡಿ ಇವರು ದಿನಾಂಕ:2-8-2001ರಂದು ಶ್ರಿ ಕೃಷ್ಣಪ್ಪ ಖೋತಾ ಇವರ ಹೆಸರಿನಲ್ಲಿದ್ದ ಸದರಿ ಜಮೀನುಗಳು ಇರುವುದಿಲ್ಲವೆಂಬ ಕಾರಣದಿಂದ ಸದರಿ ಹಕ್ಕು ದಾಖಲಾತಿ ರದ್ದುಪಡಿಸಿದ್ದು, ಅದರಂತೆ ವಿಷಯ ನಿರ್ವಾಹಕರು ಸದರಿ ರೈತಾವಾ ಆದೇಶ ರದ್ದು ಪಡಿಸುವ ಬಗ್ಗೆ ದಿನಾಂಕ:8-9-2001ರಲ್ಲಿ ಟಿಪ್ಪಣಿ ಮಂಡಿಸಿದ್ದು, ಸದರಿ ಆದೇಶವನ್ನು ರದ್ದುಪಡಿಸಲು ದಿನಾಂಕ:9-9-2001ರಂದು ಸದರಿ ಟಿಪ್ಪಣಿಗೆ ಶ್ರೀ ಸಿ.ಜಿ.ಪಾಟೀಲರು ಅನುಮೋದನೆ ನೀಡಿದ್ದರೂ ಸಹ ದಿ:7-9-2001ರಂದು (ಹಿಂದಿನ ದಿನಾಂಕ ನಮೂದಿಸಿ ರೈತಾವಾ ಆದೇಶ ರದ್ದುಪಡಿಸಿ ಕರ್ತವ್ಯಚ್ಯುತಿ ಎಸಗಿರುತ್ತಾರೆಂಬ ಕಾರಣಕ್ಕಾಗಿ ಇವರ ವಿರುದ್ಧ ಶಿಸ್ತು ಕ್ರಮ ಜರುಗಿಸುವಂತೆ ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ:23-4-2002ರ ಅ.ಸ.ಪತ್ರ ಹಾಗೂ ದಿನಾಂಕ:28-4-2005ರ ಪತ್ರಗಳಲ್ಲಿ ಜಿಲ್ಲಾಧಿಕಾರಿಗಳು ಸರ್ಕಾರವನ್ನು ಕೋರಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಶ್ರೀ ಸಿ.ಜಿ.ಪಾಟೀಲರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸಲು ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿ:27-5-2005ರ ಕಾರಣ ಕೇಳುವ ನೋಟೀಸಿನೊಂದಿಗೆ ಅವರ ವಿರುದ್ಧದ ದೋಷಾರೋಪಣೆಗಳನ್ನು ಜಾರಿಗೊಳಿಸಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ದಿನಾಂಕ:16-6-2005 ರಂದು ಲಿಖಿತ ಉತ್ತರ ಸಲ್ಲಿಸಿರುವ ಶ್ರೀ ಸಿ.ಜಿ.ಪಾಟೀಲರು ಈ ಪ್ರಕರಣದಲ್ಲಿ ತಾವು ಯಾವುದೇ ಆದೇಶದಲ್ಲಿ ಹಿಂದಿನ ದಿನಾಂಕ ವನ್ನು ನಮೂದಿಸಿರುವುದಿಲ್ಲವೆಂದು ಆ ರೀತಿ ತಪ್ಪಾಗಿ ದಿನಾಂಕವನ್ನು ನಮೂದಿಸಿರುವುದು ಸಂಬಂಧಿಸಿದ ವಿಷಯ ನಿರ್ವಾಹಕರ ಕಣ್‌ತಪ್ಪಿನಿಂದಾಗಿ ಲೋಪವಾಗಿದೆಯೇ ಹೊರತು ಉದ್ದೇಶಪೂರ್ವಕವಾಗಿ ಆಗಿರುವುದಿಲ್ಲವೆಂದು ತಿಳಿಸಿರುತ್ತಾರೆ. ಅಲ್ಲದೆ, ಶ್ರೀ ಕೃಷ್ಣಪ್ಪ ಮಾರುತಿ ಖೋತಾ ಅವರು ಮಾಲ್ಕೀವ ಕಬ್ಜಾ ವಹಿವಾಟಿಯಲ್ಲಿದ್ದ ಜಮೀನನ್ನು ಸದರಿ ಜಮೀನಿನ ಆಕಾರದ 15 ಪಟ್ಟು ರಕಂ ಅನ್ನು ಭರಣ ಮಾಡಿ ಮಾಡಿರುತ್ತಾರೆಂದು ಈ ಕಾರಣದಿಂದಾಗಿ ಸದರಿಯವರಿಗೆ ಯಾವುದೇ ಆರ್ಥಿಕ ಅಥವಾ ಮಾನಸಿಕ ತೊಂದರೆ ಉಂಟಾಗಿರುವುದಿಲ್ಲವೆಂದು ತಿಳಿಸಿರುತ್ತಾರೆ. ತಾಲ್ಲೂಕಿನ ಕಾರ್ಯನಿರ್ವಾಹಕ ದಂಡಾಧಿಕಾರಿಯಾಗಿಯೂ ತಹಸೀಲ್ದಾರರು ಕಾರ್ಯ ನಿರ್ವಹಿಸಬೇಕಾಗಿರುವುದರಿಂದ ಹೆಚ್ಚಿನ ಕಾರ್ಯಭಾರದ ಒತ್ತಡದಿಂದಾಗಿ ತಮ್ಮ ಅಧೀನ ಸಿಬ್ಬಂದಿಯವರು ಮಂಡಿಸಿದ ಕಡತವನ್ನು ಅವರ ಮೇಲೆ ವಿಶ್ವಾಸವಿಟ್ಟು ನಿಕಾಲೆ ಮಾಡಬೇಕಾಗಿರುತ್ತದೆಯೆಂದು ಪ್ರಸ್ತುತ ಪ್ರಕರಣದಲ್ಲಿಯೂ ಸಹ ತಾವು ಅದೇ ಪ್ರಕಾರ ಕಾರ್ಯ ನಿರ್ವಹಿಸಿದ್ದು, ಇದರಿಂದ ಯಾರಿಗೂ ತೊಂದರೆಯಾಗದಿದ್ದರೂ ಸಹ ತಪ್ಪು ಕಲ್ಪನೆಗೆ ಆಸ್ಪದವಾಗಿರುತ್ತದೆಂದು ತಿಳಿಸಿರುತ್ತಾರೆ.

ಸದರಿ ಲಿಖಿತ ಉತ್ತರವನ್ನು ಪರಿಶೀಲಿಸಿದ ಸರ್ಕಾರವು ಶ್ರೀ ಸಿ.ಜಿ.ಪಾಟೀಲರು ಸಹಿ ಮಾಡಿರುವ ಆದೇಶಕ್ಕೆ ವಿಷಯ ನಿರ್ವಾಹಕರು ಸರಿಯಾದ ದಿನಾಂಕವನ್ನು ನಮೂದಿಸದಿರುವುದರಿಂದ ಹಾಗೂ ದಿನಾಂಕ: 19-10-93ರ ಸರ್ಕಾರಿ ಸುತ್ತೋಲೆ ಸಂಖ್ಯೆ:ಆರ್‌ಡಿ 181 ಐಎಸ್‌ಎಂ 92ರನ್ವಯ ದಿ:7-8-93ಕ್ಕೆ ಮುಂಚೆ ಖರೀದಿ/ವಿಕ್ರಯ ಆದ ಜಮೀನುಗಳ ಆಕಾರದ 15 ರಷ್ಟು ಹಣವನ್ನು ಸರ್ಕಾರಕ್ಕೆ ಭರಣ ಮಾಡಿದ್ದಲ್ಲಿ ಸದರಿ ಖರೀದಿ ವ್ಯವಹಾರ ಸಕ್ರಮವಾಗಿರುವುದೆಂದು ತಿಳಿಸಿದ್ದು, ಈ ಪ್ರಕರಣದಲ್ಲಿ 15 ವರ್ಷಗಳ ಷರತ್ತು ಸಹ ದಿನಾಂಕ:7-8-93ಕ್ಕೆ ಮುಕ್ತಾಯವಾಗಿರುವುದರಿಂದ ಈ ಪ್ರಕರಣವು ಸಹ ಸಕ್ರಮವಾಗಿರುವುದೆಂದು ಭಾವಿಸಿ ಇದರಿಂದ ಖರೀದಿದಾರರು ಮಾನಸಿಕವಾಗಿ ಹಾಗೂ ಆರ್ಥಿಕವಾಗಿ ತೊಂದರೆಗೆ ಒಳಗಾಗಿರುವುದಿಲ್ಲವೆಂದು ಭಾವಿಸಿ ಶ್ರೀ ಸಿ.ಜಿ.ಪಾಟೀಲ್ ಇವರ ವಿರುದ್ಧದ ಉದ್ದೇಶಿತ ಶಿಸ್ತು ಕ್ರಮದಿಂದ ಕೈಬಿಡುವುದು ಸೂಕ್ತವೆಂದು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 22 ಎಡಿಇ 2002, ಬೆಂಗಳೂರು, ದಿನಾಂಕ: 14ನೇ ನವೆಂಬರ್, 2005**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿರುವ ಹಿನ್ನೆಯಲ್ಲಿ ಶ್ರೀ ಸಿ.ಜಿ.ಪಾಟೀಲ್, ಹಿಂದಿನ ತಹಶೀಲ್ದಾರ್, ಚಿಕ್ಕೋಡಿ ತಾಲ್ಲೂಕು, ಹಾಲಿ ನಿವೃತ್ತರು ಇವರ ವಿರುದ್ಧ ದಿನಾಂಕ:27-5-2005ರ ಕಾರಣ ಕೇಳುವ ನೋಟೀಸು ಸಂಖ್ಯೆ:ಆರ್‌ಡಿ 22 ಎಡಿಇ 2002ರೊಂದಿಗೆ ಜಾರಿಗೊಳಿಸಲಾಗಿದ್ದ ದೋಷಾರೋಪಣೆಗಳ ಬಗ್ಗೆ ಶಿಸ್ತು ಕ್ರಮ ಜರುಗಿಸುವುದನ್ನು ಈ ಮೂಲಕ ಕೈಬಿಡಲಾಗಿದೆಯೆಂದು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಮಹಂತೇಶಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು–3).

ಪಿ.ಆರ್.1668

**ವಿಷಯ:** ಶ್ರೀ ಬಿ.ಸಂಪತ್ ಕುಮಾರ್, ಹಿಂದಿನ ಉಪ ತಹಶೀಲ್ದಾರ್, ನಾಡಕಛೇರಿ, ಉತ್ತರಹಳ್ಳಿ ಹೋಬಳಿ, ಬೆಂಗಳೂರು ದಕ್ಷಿಣ ತಾಲ್ಲೂಕು, ಹಾಲಿ ತಹಸೀಲ್ದಾರ್, ದೊಡ್ಡಬಳ್ಳಾಪುರ ತಾಲ್ಲೂಕು ಮತ್ತು ಶ್ರೀ ಜೋಗಯ್ಯ, ಹಿಂದಿನ ಗ್ರಾಮಲೆಕ್ಕಿಗ, ಸಾರಕ್ಕಿ ವೃತ್ತ, ಬೆಂಗಳೂರು ದಕ್ಷಿಣ ತಾಲ್ಲೂಕು ಹಾಲಿ ನಿವೃತ್ತರು ಇವರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಜರುಗಿಸುವ ಬಗ್ಗೆ.

**ಓದಲಾಗಿದೆ:**

1. ಹಿಂದಿನ ಬೆಂಗಳೂರು ವಿಭಾಗಾಧಿಕಾರಿಯವರ ದಿನಾಂಕ:12-7-2000ರ ಪತ್ರ ಸಂಖ್ಯೆ:ಸಿಸಿಎ/13/2000-01.
2. ಶ್ರೀ ಬಿ.ಸಂಪತ್ ಕುಮಾರ್, ತಹಶೀಲ್ದಾರ್ ಮತ್ತು ಶ್ರೀ ಜೋಗಯ್ಯ, ಹಿಂದಿನ ಗ್ರಾಮಲೆಕ್ಕಿಗ ಇವರಿಗೆ ನೀಡಿರುವ ತಿಳುವಳಿಕೆ ಪತ್ರ ಸಂಖ್ಯೆ:ಕಂಇ 28 ಎಡಿಇ 2004,ದಿ:19-12-2000.
3. ಅಧಿಕಾರಿ/ನೌಕರರು ನೀಡಿರುವ ಲಿಖಿತ ಹೇಳಿಕೆ:
   i) ಶ್ರೀ ಬಿ.ಸಂಪತ್ ಕುಮಾರ್, ತಹಶೀಲ್ದಾರ್, ದಿನಾಂಕ:12-2-2001.
   ii) ಶ್ರೀ ಜೋಗಯ್ಯ, ಹಿಂದಿನ ಗ್ರಾಮ ಲೆಕ್ಕಿಗ, ದಿನಾಂಕ:4-2-2004.

**ಪ್ರಸ್ತಾವನೆ:**

ಬೆಂಗಳೂರು ದಕ್ಷಿಣ ತಾಲ್ಲೂಕು ಉತ್ತರ ಹಳ್ಳಿ ಹೋಬಳಿ ಸಾರಕ್ಕಿ ಗ್ರಾಮದ ಸರ್ವೆ ನಂ. 71/1ಎ, 71/1ಬಿ ಮತ್ತು 71/2, ಹಾಗೂ ಬನಶಂಕರಿ ದೇವಸ್ಥಾನಕ್ಕೆ ಸೇರಿದ ಸರ್ವೆ ನಂ.71ರಲ್ಲಿನ ಜಮೀನುಗಳ ಅಕ್ರಮ ದಾಖಲೆಗಳನ್ನು ಸೃಷ್ಟಿಸಿ ಖಾಸಗಿ ವ್ಯಕ್ತಿಗಳಿಗೆ ನಿಯಮಬಾಹಿರವಾಗಿ ದಿ:10-6-96ರಂದು ಖಾತೆ ಬದಲಾವಣೆ ಮಾಡಿ ಕರ್ತವ್ಯಚ್ಯುತಿ ಎಸಗಿರುತ್ತಾರೆಂದು ಶ್ರೀ ಬಿ.ಸಂಪತ್ ಕುಮಾರ್, ಹಿಂದಿನ ಉಪ ತಹಶೀಲ್ದಾರ್, ನಾಡಕಛೇರಿ, ಉತ್ತರಹಳ್ಳಿ ಹೋಬಳಿ, ಬೆಂಗಳೂರು ದಕ್ಷಿಣ ತಾಲ್ಲೂಕು, ಹಾಲಿ ತಹಸೀಲ್ದಾರ್, ದೊಡ್ಡಬಳ್ಳಾಪುರ ತಾಲ್ಲೂಕು ಮತ್ತು ಶ್ರೀ ಜೋಗಯ್ಯ, ಹಿಂದಿನ ಗ್ರಾಮಲೆಕ್ಕಿಗ, ಸಾರಕ್ಕಿ ವೃತ್ತ, ಬೆಂಗಳೂರು ದಕ್ಷಿಣ ತಾಲ್ಲೂಕು ಇವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಜರುಗಿಸುವಂತೆ ಕರಡು ದೋಷಾರೋಪಣೆಗಳನ್ನು ತಯಾರಿಸಿ ಮೇಲೆ ಕ್ರಮ ಸಂಖ್ಯೆ(1)ರಲ್ಲಿ ಓದಲಾದ ದಿ:12-7-2000ದ ಪತ್ರದಲ್ಲಿ ಹಿಂದಿನ ವಿಭಾಗಾಧಿಕಾರಿಯವರು ಸರ್ಕಾರವನ್ನು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 13ರಡಿಯಲ್ಲಿ ದೋಷಾರೋಪಣೆಗಳನ್ನು (ಅನುಬಂಧ iರಿಂದ ivರವರೆಗೆ)ಆರೋಪಿತ ಅಧಿಕಾರಿ/ನೌಕರರುಗಳಿಗೆ ಜಾರಿ ಮಾಡಿ, ಆರೋಪಗಳ ಬಗ್ಗೆ ಲಿಖಿತ ಹೇಳಿಕೆ ಸಲ್ಲಿಸಲು ಮೇಲೆ ಕ್ರಮ ಸಂಖ್ಯೆ(2)ರಲ್ಲಿ ಓದಲಾದ ದಿನಾಂಕ:19-12-2000ರ ತಿಳುವಳಿಕೆ ಪತ್ರವನ್ನು ಜಾರಿಗೊಳಿಸಲಾಗಿತ್ತು.

ಆಪಾದಿತ ಅಧಿಕಾರಿ/ನೌಕರರಲ್ಲಿ ಮೇಲೆ ಕ್ರಮ ಸಂಖ್ಯೆ(3)ರಲ್ಲಿ ಓದಲಾದ ದಿ:12-2-2001ರ ತಮ್ಮ ಲಿಖಿತ ಹೇಳಿಕೆಯಲ್ಲಿ ಶ್ರೀ ಬಿ.ಸಂಪತ್ ಕುಮಾರ್‌ರವರು ತಮ್ಮ ವಿರುದ್ಧದ ಆರೋಪಗಳನ್ನು ಒಪ್ಪಿಕೊಂಡಿರುವುದಿಲ್ಲ ಹಾಗೂ ತಾವು ಈ ವಿಷಯದಲ್ಲಿ ನಿರ್ದೋಷಿಯಾಗಿರುವುದರಿಂದ ಉದ್ದೇಶಿತ ಶಿಸ್ತುಕ್ರಮದಿಂದ ತಮ್ಮನ್ನು ಕೈಬಿಡುವಂತೆ ಕೋರಿರುತ್ತಾರೆ. ಮತ್ತೊಬ್ಬ ಆಪಾದಿತರೆಂದು ಹೇಳಲಾಗಿರುವ ಶ್ರೀ ಜೋಗಯ್ಯ ರವರಿಗೆ ಆರೋಪಪಟ್ಟಿಗಳನ್ನು ಜಾರಿಗೊಳಿಸುವಲ್ಲಿ ಅತ್ಯಂತ ವಿಳಂಬ ಮಾಡಿದ್ದು, ಅದನ್ನು ದಿ:1-9-2004ರಂದು ಜಾರಿಗೊಳಿಸಿರುವುದಾಗಿ ಬೆಂಗಳೂರು ಗ್ರಾಮಾಂತರ ಜಿಲ್ಲಾಧಿಕಾರಿಗಳು ಸರ್ಕಾರಕ್ಕೆ ವರದಿ ಮಾಡಿರುತ್ತಾರೆ. ಅದರಂತೆ ಶ್ರೀ ಜೋಗಯ್ಯ ಇವರು ದಿನಾಂಕ:4-2-2004ರ ಲಿಖಿತ ಉತ್ತರದಲ್ಲಿ ತಾವು ಈಗಾಗಲೇ ಸೇವೆಯಿಂದ ನಿವೃತ್ತಿ ಹೊಂದಿ 6 ವರ್ಷಗಳಾಗಿರುವುದರಿಂದ ತಮ್ಮನ್ನು ಉದ್ದೇಶಿತ ಶಿಸ್ತು ಕ್ರಮದಿಂದ ಕೈಬಿಡುವಂತೆ ಕೋರಿರುತ್ತಾರೆ. ಇವರು ದಿ:31-3-98ರಂದು ವಯೋ ನಿವೃತ್ತಿ ಹೊಂದಿದ್ದಾರೆ. ಈ ಹಿನ್ನೆಲೆಯಲ್ಲಿ ಸದರಿ ಆಪಾದಿತರೆಂದು ಹೇಳಲಾಗಿರುವವರ ವಿರುದ್ಧದ ದೋಷಾರೋಪಣೆಗಳು ಹಾಗೂ ಅವರುಗಳು ಸಲ್ಲಿಸಿರುವ ಲಿಖಿತ ಸಮಜಾಯಿಷಿಯ ಸತ್ಯಾಸತ್ಯತೆಯನ್ನು ಕಂಡುಕೊಳ್ಳಲು ನಿರ್ಧರಿಸಿ ಅವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆಯನ್ನು ಜರುಗಿಸುವುದು ಸೂಕ್ತವೆಂದು ಭಾವಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 28 ಎಡಿಇ 2000, ಬೆಂಗಳೂರು, ದಿನಾಂಕ: 14ನೇ ನವೆಂಬರ್, 2005**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿರುವ ಹಿನ್ನೆಲೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 13 ರಡಿಯಲ್ಲಿ ಹಾಗೂ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಬಿ.ಸಂಪತ್ ಕುಮಾರ್, ಹಿಂದಿನ ಉಪ ತಹಶೀಲ್ದಾರ್, ನಾಡಕಛೇರಿ, ಉತ್ತರಹಳ್ಳಿ ಹೋಬಳಿ, ಬೆಂಗಳೂರು ದಕ್ಷಿಣ ತಾಲ್ಲೂಕು, ಹಾಲಿ ತಹಸೀಲ್ದಾರ್, ದೊಡ್ಡಬಳ್ಳಾಪುರ ತಾಲ್ಲೂಕು ಮತ್ತು ಶ್ರೀ ಜೋಗಯ್ಯ, ಹಿಂದಿನ ಗ್ರಾಮಲೆಕ್ಕಿಗ, ಸಾರಕ್ಕಿ ವೃತ್ತ, ಬೆಂಗಳೂರು ದಕ್ಷಿಣ ತಾಲ್ಲೂಕು ಹಾಲಿ ನಿವೃತ್ತರು ಇವರುಗಳ ವಿರುದ್ಧ ಆರೋಪಗಳ ಬಗ್ಗೆ ಜಂಟಿ ಇಲಾಖಾ ವಿಚಾರಣೆ ಜರುಗಿಸಲು ಶ್ರೀ ಬಿ.ಕೆ.ಕಣವಿ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ನಂ.1278, 3ನೇ ಅಡ್ಡ ರಸ್ತೆ, ನ್ಯಾಯಾಧೀಶರ ಬಡಾವಣೆ, ಜಿಕೆವಿಕೆ ಅಂಚೆ, ಬೆಂಗಳೂರು-65 ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಬೆಂಗಳೂರು ನಗರ ಜಿಲ್ಲಾಧಿಕಾರಿಗಳ ಕಛೇರಿಯ ಕೇಂದ್ರಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ಬೆಂಗಳೂರು ನಗರ ಜಿಲ್ಲಾಧಿಕಾರಿಗಳ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿ ಪಡಿಸಿದ ಸ್ಥಳದಲ್ಲಿ ಇಲಾಖಾ ವಿಚಾರಣೆಯನ್ನು ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ಮಾಡುವುದು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ/ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಾಗ್ರಿಗಳನ್ನು ಒದಗಿಸತಕ್ಕದ್ದು.

ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ರೂ.5000/-(ಐದು ಸಾವಿರ ರೂಪಾಯಿ ಗಳು ಮಾತ್ರ) ಸಂಚಿತ ಸಂಭಾವನೆಯನ್ನು ಹಾಗೂ ದಿನಾಂಕ:4-3-2002ರ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 45 ಸೇಇವಿ 2001 ರನ್ವಯ 1000/-(ಒಂದು ಸಾವಿರ ರೂಪಾಯಿಗಳು ಮಾತ್ರ) ರೂ.ಗಳ ವಾಹನ ಭತ್ಯೆ(ಕನ್ವೇಯನ್ಸ್ ಅಲೋಯೆನ್ಸ್)ನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಬೆಂಗಳೂರು ನಗರ ಜಿಲ್ಲಾಧಿಕಾರಿಗಳು ಪಾವತಿ ಮಾಡತಕ್ಕದ್ದು.

ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣೆಯನ್ನು ಮೇಲ್ಕಂಡ ನಿಯಮಾವಳಿಗಳ ನಿಯಮ 11 ಮತ್ತು 11(ಎ)ರಲ್ಲಿನ ವಿಧಿವಿಧಾನಗಳನ್ನು ಅನುಸರಿಸಿ ಜರುಗಿಸಿ ವಿಚಾರಣಾ ವರದಿಯನ್ನು ಎರಡು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಮಹಂತೇಶಯ್ಯ**

ಪಿ.ಆರ್.1669

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು-3).

**ವಿಷಯ:** ಬೆಂಗಳೂರು ಗ್ರಾಮಾಂತರ ಜಿಲ್ಲೆಯ ರಾಮನಗರಂ ತಾಲ್ಲೂಕು ಬಿಡದಿ ಹೋಬಳಿ, ಕೊಡಿಯಾಲಕರೇನ ಹಳ್ಳಿ ಗ್ರಾಮದ ಸರ್ವೆ ನಂ.508ರ ಜಮೀನಿನ ಖಾತೆ ಮಾಡಿರುವ ಬಗ್ಗೆ ಜಂಟಿ ಇಲಾಖಾ ವಿಚಾರಣೆ-ಶ್ರೀ ದಾದಾರಾವ್, ತಹಸೀಲ್ದಾರ್ ಇವರನ್ನು ಆರೋಪ ಮುಕ್ತರನ್ನಾಗಿಸುವ ಬಗ್ಗೆ.

**ಓದಲಾಗಿದೆ:**
1. ದಿನಾಂಕ:6-8-2003ರ ಸರ್ಕಾರಿ ಆದೇಶ ಸಂಖ್ಯೆ:ಕಂಇ 65 ಎಡಿಇ 2001.
2. ವಿಚಾರಣಾಧಿಕಾರಿಯವರ ದಿನಾಂಕ:18-01-2004ರ ವಿಚಾರಣಾ ವರದಿ.

**ಪ್ರಸ್ತಾವನೆ:**

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ರಾಮನಗರ ತಾಲ್ಲೂಕು ಬಿಡದಿ ಹೋಬಳಿ ಕೊಡಿಯಾಲಕರೇನಹಳ್ಳಿ ಗ್ರಾಮದ ಸರ್ವೆ ನಂ.508ರಲ್ಲಿ 7 ಎಕರೆ 13 ಗುಂಟೆ ಜಮೀನು ಖಾತೆ ಮಾಡುವಲ್ಲಿ ಅಕ್ರಮ ಎಸಗಿರುತ್ತಾರೆಂಬ ಕಾರಣಕ್ಕಾಗಿ ಸಂಬಂಧಪಟ್ಟ ತಾಲ್ಲೂಕಿನ ತಹಸೀಲ್ದಾರರಾಗಿದ್ದ ಶ್ರೀ ದಾದಾರಾವ್ ಮತ್ತು ಶ್ರೀಯುತರಾದ ಬಿ.ಎಂ.ರಾಮೇಗೌಡ, ಹಿಂದಿನ ಉಪ ತಹಸೀಲ್ದಾರ್, ನಾಡಕಛೇರಿ, ಬಿಡದಿ, ಮುನಿಸ್ವಾಮಯ್ಯ, ಹಿಂದಿನ ರಾಜಸ್ವ ನಿರೀಕ್ಷಕ, ಬಿಡದಿ ಹೋಬಳಿ ಮತ್ತು ವೆಂಕಟೇಶ್, ಹಿಂದಿನ ಗ್ರಾಮಲೆಕ್ಕಿಗ, ಕೊಡಿಯಾಲಕರೇನಹಳ್ಳಿ ವೃತ್ತ, ಬಿಡದಿ ಹೋಬಳಿ ಇವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಜರುಗಿಸಲು ಮೇಲೆ ಕ್ರಮ ಸಂಖ್ಯೆ(1)ರಲ್ಲಿ ಓದಲಾದ ದಿನಾಂಕ:6-8-2003ರ ಸರ್ಕಾರಿ ಆದೇಶದಲ್ಲಿ ಶ್ರೀ ಎನ್.ಎಸ್.ಸಂಗೊಳ್ಳಿ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಸದರಿ ಆದೇಶದನ್ವಯ ಈ ಪ್ರಕರಣದಲ್ಲಿ ಜಂಟಿ ಇಲಾಖಾ ವಿಚಾರಣೆಯನ್ನು ಜರುಗಿಸಿ ಮೇಲೆ ಕ್ರಮ ಸಂಖ್ಯೆ(2)ರಲ್ಲಿ ಓದಲಾದ ದಿನಾಂಕ:18-1-2004ರ ತಮ್ಮ ವಿಚಾರಣಾ ವರದಿಯಲ್ಲಿ ಈ ಪ್ರಕರಣದಲ್ಲಿ ಶ್ರೀ ದಾದಾರಾವ್ ಇವರ ವಿರುದ್ಧದ ಆರೋಪಗಳು ರುಜುವಾತಾಗಿರುವುದಿಲ್ಲವೆಂದು ವಿಚಾರಣಾಧಿಕಾರಿಗಳು ಅಭಿಪ್ರಾಯ ಪಟ್ಟಿರುತ್ತಾರೆ. ಸದರಿ ವಿಚಾರಣಾ ವರದಿಯನ್ನು ಪರಿಶೀಲಿಸಿದ ಸರ್ಕಾರವು ಈ ಆಪಾದಿತ ಅಧಿಕಾರಿಗೆ ಸಂಬಂಧಿಸಿದಂತೆ ಸಮರ್ಪಕವಾಗಿ ಕಂಡು ಬಂದ ಕಾರಣ ಸದರಿ ವಿಚಾರಣಾ ವರದಿ ಹಾಗೂ ಅದಕ್ಕೆ ಸಂಬಂಧಿಸಿದ ದಾಖಲೆಗಳನ್ನು ಪರಿಶೀಲಿಸಿ ವಿಚಾರಣಾಧಿಕಾರಿಗಳ ವಿಚಾರಣಾ ವರದಿಯನ್ನು ಒಪ್ಪಿಕೊಂಡು ಶ್ರೀ ದಾದಾರಾವ್, ತಹಸೀಲ್ದಾರ್, ಇವರನ್ನು ಇವರ ವಿರುದ್ಧದ ಆರೋಪಗಳಿಂದ ಮುಕ್ತಗೊಳಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ

**ಸರ್ಕಾರಿ ಆದೇಶ ಸಂಖ್ಯೆ: ಕಂಇ 65 ಎಡಿಇ 2001(1), ಬೆಂಗಳೂರು, ದಿನಾಂಕ: 14ನೇ ನವೆಂಬರ್, 2005**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿರುವ ಹಿನ್ನೆಲೆಯಲ್ಲಿ ಶ್ರೀ ದಾದಾರಾವ್, ಹಿಂದಿನ ತಹಶೀಲ್ದಾರ್, ರಾಮನಗರ ತಾಲ್ಲೂಕು, ಹಾಲಿ ತಹಸೀಲ್ದಾರ್, ಕನಕಪುರ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರ ವಿರುದ್ಧ ದಿನಾಂಕ:6-8-2003ರ ಸರ್ಕಾರಿ ಆದೇಶ ಸಂಖ್ಯೆ:ಕಂಇ 65 ಎಡಿಇ 2001 ರಲ್ಲಿ ಹೊರಿಸಲಾದ ಆರೋಪಗಳಿಂದ ಮುಕ್ತಗೊಳಿಸಿ ಆದೇಶಿಸಿದೆ.

ಈ ಪ್ರಕರಣದ ಮಟ್ಟಿಗೆ ಸಂಬಂಧಿಸಿದಂತೆ ಮಾತ್ರ ಶ್ರೀ ದಾದಾರಾವ್, ಹಿಂದಿನ ತಹಶೀಲ್ದಾರ್, ರಾಮನಗರ ತಾಲ್ಲೂಕು, ಹಾಲಿ ತಹಸೀಲ್ದಾರ್, ಕನಕಪುರ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರ ವಿರುದ್ಧ ಇತರರೊಂದಿಗೆ ಜಂಟಿ ಇಲಾಖಾ ವಿಚಾರಣೆ ಜರುಗಿಸದಿದ್ದಲ್ಲಿ, ಇವರು ಯಾವ ಸೇವಾ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅಂತಹ ಸೇವಾ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1670

**ಎಂ.ಎಸ್. ಮಹಂತೇಶಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು-3).

**ವಿಷಯ :** ಶ್ರೀ ವಿ.ಆರ್. ರಂಗಶಾಮಯ್ಯ, ಸಹಾಯಕ ಆಯುಕ್ತರು, ಹೆಚ್.ಆರ್. ಅಂಡ್ ಸಿ.ಇ., ಮಂಗಳೂರು, ಇವರ ಅಮಾನತ್ತು ಅವಧಿಯನ್ನು ಕರ್ತವ್ಯದ ಅವಧಿಯೆಂದು ಪರಿಗಣಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಅಧಿಸೂಚನೆ ಸಂ.ಕಂಇ 75 ಎಂಇಟಿ 1993 ದಿ:21/03/1995 ಮತ್ತು ದಿ:19/05/1995
2. ಸರ್ಕಾರಿ ಆದೇಶ ಸಂ.ಕಂಇ 75 ಎಂಇಟಿ 1993 ದಿ:20/05/1995
3. ಸರ್ಕಾರದ ಅಧಿಸೂಚನೆ ಸಂ.ಕಂಇ 75 ಎಂಇಟಿ 1993 (ಭಾಗ) 17/07/1996

4. ಸರ್ಕಾರಿ ಆದೇಶ ಸಂ.ಕಂಇ 75 ಎಂಇಟಿ 1993(ಭಾಗ) ದಿ:05/08/2000
5. ಸರ್ಕಾರಿ ಆದೇಶ ಸಂ.ಕಂಇ 75 ಎಂಇಟಿ 1993(ಭಾಗ–4) ದಿ:28/02/2003
6. ಸರ್ಕಾರಿ ಆದೇಶ ಸಂ.ಕಂಇ 75 ಎಂಇಟಿ 1993(ಭಾಗ–4) ದಿ:26/08/2004
7. ಶ್ರೀ ವಿ.ಆರ್. ರಂಗಶಾಮಯ್ಯ ರವರ ಮನವಿ ದಿ:05/05/2005

**ಪ್ರಸ್ತಾವನೆ:**

ಶ್ರೀ ವಿ.ಆರ್. ರಂಗಶಾಮಯ್ಯ, ಸಮೂಹ ಎ (ಕಿರಿಯ ಶ್ರೇಣಿ) ಅಧಿಕಾರಿ ಹಾಗೂ ಸಹಾಯಕ ಆಯುಕ್ತರು, ಹೆಚ್.ಆರ್.ಅಂಡ್.ಸಿ.ಇ., ಮಂಗಳೂರು ರವರು ಈ ಹಿಂದೆ ಬೆಂಗಳೂರಿನ ಶ್ರೀ ಬನಶಂಕರಿ ದೇವಸ್ಥಾನದ ಕಾರ್ಯನಿರ್ವಾಹಕ ಅಧಿಕಾರಿಯಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಸದರಿ ದೇವಸ್ಥಾನದ ಜಮೀನಿನ ಅವ್ಯವಹಾರಗಳಿಗೆ ಸಂಬಂಧಿಸಿದಂತೆ ಮೇಲೆ ಕ್ರಮ ಸಂ.(1)ರಲ್ಲಿ ಓದಲಾದ ಸರ್ಕಾರದ ದಿ:21/03/1995ರ ಅಧಿಸೂಚನೆಯಲ್ಲಿ ಸದರಿಯವರ ಮೇಲಿನ ಆರೋಪಗಳ ಬಗ್ಗೆ ವಿಚಾರಣೆಯನ್ನು ಬಾಕಿ ಇರಿಸಿ, ತಕ್ಷಣದಿಂದ ಜಾರಿಗೆ ಬರುವಂತೆ ಅಮಾನತ್ತಿನಲ್ಲಿರಿಸಲಾಗಿತ್ತು. ಶ್ರೀ ವಿ.ಆರ್. ರಂಗಶಾಮಯ್ಯ ರವರು ಕೆ.ಎ.ಟಿ.ಯಲ್ಲಿ ತಮ್ಮ ಅಮಾನತ್ತಿನ ಆದೇಶವನ್ನು ಪ್ರಶ್ನಿಸಿ, ಅರ್ಜಿ ಸಲ್ಲಿಸಿದ್ದು, ಅರ್ಜಿ ಸಂ.1592/1995 ದಿ:20/04/1995ರಂದು ನೀಡಿರುವ ತೀರ್ಪಿನಲ್ಲಿ ಅಧಿಸೂಚನಾ ಆದೇಶವು ಕಾರಣ ರಹಿತವಾಗಿರುವುದರಿಂದ ಆದೇಶವನ್ನು ರದ್ದುಪಡಿಸಿ, ಸಕಾರಣಗಳನ್ನು ನೀಡಿ, ಹೊಸದಾಗಿ ಸುಸ್ಪಷ್ಟ ಆದೇಶ ಹೊರಡಿಸುವ ಬಗ್ಗೆ ಸರ್ಕಾರಕ್ಕೆ ಸ್ವಾತಂತ್ರ ನೀಡಿರುತ್ತದೆ. ಅದರಂತೆ ಮೇಲೆ ಕ್ರಮ ಸಂ.(1)ರ ಸರ್ಕಾರದ ದಿ:19/05/1995ರ ಅಧಿಸೂಚನೆಯಲ್ಲಿ ಸದರಿಯವರ ಅಮಾನತ್ತಿನ ಅವಧಿಯನ್ನು ತೆರವುಗೊಳಿಸಿ ಮತ್ತೆ ಸೇವೆಗೆ ತೆಗೆದುಕೊಳ್ಳಲು ಆದೇಶಿಸಲಾಗಿತ್ತು.

ಶ್ರೀ ಬನಶಂಕರಿ ದೇವಸ್ಥಾನದ ಅವ್ಯವಹಾರದಲ್ಲಿ ಇವರು ಪರೋಕ್ಷವಾಗಿ ಭಾಗಿಯಾಗಿರುವಂತೆ ಮೇಲ್ನೋಟಕ್ಕೆ ಕಂಡು ಬಂದಿದ್ದರಿಂದ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ತೀರ್ಪಿನಲ್ಲಿ ನೀಡಿದ ಸೂಚನೆ ಗಮನಿಸಿ, ಸ್ಪಷ್ಟ ಕಾರಣಗಳನ್ನು ವಿಷದ ಪಡಿಸಿ, ಶ್ರೀ ವಿ.ಆರ್. ರಂಗಶಾಮಯ್ಯ ರವರ ಮೇಲಿನ ಆರೋಪಗಳ ಬಗ್ಗೆ ವಿಚಾರಣೆ ಬಾಕಿ ಇರಿಸಿ, ಮೇಲೆ ಓದಲಾದ ಕ್ರಮ ಸಂ.(2)ರ ದಿ:20/05/1995ರ ಆದೇಶದಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ ಅಮಾನತ್ತುಗೊಳಿಸಿ, ಆದೇಶಿಸಲಾಗಿದೆ. ಸದರಿಯವರ ಮೇಲಿನ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ಬಾಕಿ ಇರಿಸಿ, ಅಮಾನತ್ತು ತೆರವುಗೊಳಿಸಿ, ಮೇಲೆ ಕ್ರಮ ಸಂ.(3)ರಲ್ಲಿ ಓದಲಾದ ದಿ:17/07/1996ರ ಅಧಿಸೂಚನೆಯಲ್ಲಿ ಅವರನ್ನು ಸೇವೆಗೆ ತೆಗೆದುಕೊಂಡು ಶಿವಮೊಗ್ಗ ಜಿಲ್ಲಾಧಿಕಾರಿಗಳ ಕಛೇರಿಯಲ್ಲಿನ ಮುಜರಾಯಿ ಸಹಾಯಕರ ಹುದ್ದೆಗೆ ನೇಮಿಸಿ, ಆದೇಶಿಸಿದೆ.

ಈ ಪ್ರಕರಣವನ್ನು ಸಿ.ಓ.ಡಿ. ತನಿಖೆಗೆ ವಹಿಸಿದ್ದು, ಸಿ.ಓ.ಡಿ. ವರದಿ ಬಂದ ನಂತರ ಈ ಪ್ರಕರಣವನ್ನು ಇಲಾಖಾ ವಿಚಾರಣೆ ನಡೆಸಲು ಮೇಲೆ ಓದಲಾದ ಕ್ರಮ ಸಂ.(4)ರ ದಿ:05/08/2000ರ ಆದೇಶದಲ್ಲಿ ವಿಚಾರಣಾಧಿಕಾರಿಗಳನ್ನು ನೇಮಕ ಮಾಡಲಾಗಿತ್ತು. ಕ್ರಮ ಸಂ.(5)ರ ದಿ:28/02/2003ರ ಆದೇಶದಲ್ಲಿ ವಿಚಾರಣಾಧಿಕಾರಿಗಳನ್ನು ಬದಲಾಯಿಸಿ, ಬೇರೊಬ್ಬ ವಿಚಾರಣಾಧಿಕಾರಿಗಳನ್ನು ನೇಮಕ ಮಾಡಲಾಗಿತ್ತು. ಆರೋಪ ಸಾಭೀತಾಗಿಲ್ಲವೆಂದು ವಿಚಾರಣಾಧಿಕಾರಿಗಳು ನೀಡಿರುವ ವರದಿಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಶ್ರೀ ವಿ.ಆರ್. ರಂಗಶಾಮಯ್ಯ, ಸಮೂಹ ಎ (ಕಿರಿಯ ಶ್ರೇಣಿ) ಅಧಿಕಾರಿ ಹಾಗೂ ಅಂದಿನ ಸಹಾಯಕ ಆಯುಕ್ತರು, ಹೆಚ್.ಆರ್.ಅಂಡ್.ಸಿಇ., ಮಂಗಳೂರು ಮತ್ತು ಅಂದಿನ ಕಾರ್ಯನಿರ್ವಹಣಾಧಿಕಾರಿಗಳು, ಶ್ರೀ ಬನಶಂಕರಿ ದೇವಸ್ಥಾನ, ಬೆಂಗಳೂರು ಇವರ ಮೇಲೆ ಹೊರಿಸಲಾದ ಆರೋಪಗಳಿಂದ ಮುಕ್ತರನ್ನಾಗಿಸಿ, ಮೇಲೆ ಓದಲಾದ ಕ್ರಮ ಸಂ.(6)ರ ದಿ:26/08/2004ರಲ್ಲಿ ಆದೇಶಿಸಿದೆ.

ತಮ್ಮ ಮೇಲಿನ ಆರೋಪಗಳಿಂದ ಮುಕ್ತರನ್ನಾಗಿಸಿ, ಸರ್ಕಾರವು ಆದೇಶಿಸಿದ್ದು, ತಮ್ಮ ಅಮಾನತ್ತು ಅವಧಿ ದಿ:21/03/1995ರಿಂದ 17/07/1996ರ ಅವಧಿಯನ್ನು ಕರ್ತವ್ಯ ಅವಧಿಯೆಂದು ಘೋಷಿಸಲು ಕೋರಿ ಮೇಲೆ ಓದಲಾದ ಕ್ರಮ ಸಂ.(7)ರ ದಿ:05/05/2005ರಲ್ಲಿ ಶ್ರೀ ವಿ.ಆರ್. ರಂಗಶಾಮಯ್ಯರವರು ಸರ್ಕಾರಕ್ಕೆ ಮನವಿ ಸಲ್ಲಿಸಿರುತ್ತಾರೆ.

ಈ ಬಗ್ಗೆ ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಶ್ರೀ ವಿ.ಆರ್. ರಂಗಶಾಮಯ್ಯರವರು ಬೆಂಗಳೂರಿನ ಶ್ರೀ ಬನಶಂಕರಿ ದೇವಸ್ಥಾನದ ಕಾರ್ಯನಿರ್ವಹಣಾಧಿಕಾರಿಯಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗಿನ ಆರೋಪಗಳ ಬಗ್ಗೆ ಇಲಾಖೆ ವಿಚಾರಣೆಯನ್ನು ನಡೆಸಿ, ವಿಚಾರಣಾಧಿಕಾರಿಗಳ ವರದಿಯ ಮೇರೆಗೆ ಸದರಿಯವರನ್ನು ಆರೋಪ ಮುಕ್ತರನ್ನಾಗಿ ಆದೇಶಿಸಿರುವುದರಿಂದ ಇವರು ಅಮಾನತ್ತಿನಲ್ಲಿ ಕಳೆದ ಅವಧಿ ದಿ:21/03/1995ರಿಂದ 17/07/1996ರವರೆಗಿನ ಅವಧಿಯನ್ನು ಕರ್ತವ್ಯದ ಮೇಲೆ ಕಳೆದ ಅವಧಿಯೆಂದು ಪರಿಗಣಿಸಲು ಸರ್ಕಾರವು ತೀರ್ಮಾನಿಸಿದೆ. ಆದ ಕಾರಣ ಈ ಆದೇಶ.

**ಸರ್ಕಾರಿ ಆದೇಶ ಸಂ.ಕಂಇ 93 ಮುಸೇವಿ 2005, ಬೆಂಗಳೂರು, ದಿನಾಂಕ:14ನೇ ನವೆಂಬರ್, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ವಿ.ಆರ್. ರಂಗಶಾಮಯ್ಯ ಸಮೂಹ ಎ ಅಧಿಕಾರಿ (ಕಿರಿಯ ಶ್ರೇಣಿ) ಹಾಗೂ ಸಹಾಯಕ ಆಯುಕ್ತರು ಹೆಚ್.ಆರ್.ಅಂಡ್. ಸಿ.ಇ., ಮಂಗಳೂರು ರವರು ಈ ಹಿಂದೆ ಬೆಂಗಳೂರಿನ ಶ್ರೀ ಬನಶಂಕರಿ ದೇವಸ್ಥಾನದಲ್ಲಿ ಕಾರ್ಯನಿರ್ವಾಹಕ ಅಧಿಕಾರಿಯಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗಿನ ಆರೋಪಗಳ ಬಗ್ಗೆ ಸರ್ಕಾರದ ಆದೇಶ ಸಂ. ಕಂಇ 75 ಮುಸೇವಿ 1993 (ಭಾಗ–4) ದಿ:26/08/2004ರ ಆದೇಶದಲ್ಲಿ ಸದರಿಯವರನ್ನು ಆರೋಪ ಮುಕ್ತರನ್ನಾಗಿಸಿ, ಆದೇಶಿಸಿರುವುದರಿಂದ ಇವರನ್ನು ಅಮಾನತ್ತಿನಲ್ಲಿರಿಸಿದ ದಿ:21/03/1995ರಿಂದ 17/07/1996 ರವರೆಗಿನ (ಉಭಯ ದಿನಗಳು ಸೇರಿ) ಒಟ್ಟು ಅವಧಿಯನ್ನು ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿ ನಿಯಮ 100(3)ರನ್ವಯ ಕರ್ತವ್ಯದ ಮೇಲೆ ಕಳೆದ ಅವಧಿಯೆಂದು ಪರಿಗಣಿಸಿ, ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1686

**ರಮೇಶ್ ಕೆ. ಜಾಗೀರ್‌ದಾರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಮುಜರಾಯಿ).

**ವಿಷಯ:** ಶ್ರೀ ಭಾವಸಾರ ಕ್ಷತ್ರಿಯ ಸಮಾಜ, ಹೊಸಪೇಟೆ,ಬಳ್ಳಾರಿ ಜಿಲ್ಲೆ, ಈ ಸಂಘಕ್ಕೆ ನೇಮಕ ಮಾಡಲಾಗಿರುವ ಆಡಳಿತಾಧಿಕಾರಿಯವರ ಆಡಳಿತಾವಧಿಯನ್ನು ಮುಂದುವರಿಸಿ ಆದೇಶಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ:ಕಂಇ 47 ಮುನೊಸೊ 2002, ದಿನಾಂಕ:23-09-2004.

2. ಸರ್ಕಾರದ ಆದೇಶ ಸಂಖ್ಯೆ:ಕಂಇ 47 ಮುನೊಸೊ 2002, ದಿನಾಂಕ:14-07-2005.

**ಪ್ರಸ್ತಾವನೆ:**

ಶ್ರೀ ಭಾವಸಾರ ಕ್ಷತ್ರಿಯ ಸಮಾಜ, ಹೊಸಪೇಟೆ, ಬಳ್ಳಾರಿ ಜಿಲ್ಲೆ ಈ ಸಂಸ್ಥೆಯಲ್ಲಿನ ಅವ್ಯವಹಾರಗಳನ್ನು ಸರಿಪಡಿಸಿ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸುವಂತೆ ಮೇಲೆ-1ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೇಲ್ಕಂಡ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27-ಎ ಪ್ರಕಾರ ಉಪ ವಿಭಾಗಾಧಿಕಾರಿಗಳು, ಬಳ್ಳಾರಿ ಉಪ ವಿಭಾಗ ಇವರನ್ನು 6 ತಿಂಗಳ ಅವಧಿಗೆ ಆಡಳಿತಾಧಿಕಾರಿಯಾಗಿ ನೇಮಕ ಮಾಡಲಾಗಿತ್ತು. ನಂತರ ಮೇಲೆ ಓದಲಾದ-2ರ ಸರ್ಕಾರಿ ಆದೇಶದಲ್ಲಿ ಮುಂದುವರಿಸಲಾಗಿದ್ದ ಆಡಳಿತಾಧಿಕಾರಿಯವರ ಆಡಳಿತಾವಧಿಯು ದಿನಾಂಕ:22-09-2005ಕ್ಕೆ ಮುಗಿದಿರುತ್ತದೆ.

ದಿನಾಂಕ:13-08-2005 ರಂದು ನಡೆಯಬೇಕಿದ್ದ ಸಂಸ್ಥೆಯ ಆಡಳಿತ ಮಂಡಳಿಯ ಚುನಾವಣೆಗೆ ನ್ಯಾಯಾಲಯದ ತಡೆ ಆಜ್ಞೆ ಇರುವುದರಿಂದ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸಲು ಸಾಧ್ಯವಾಗಿರುವುದಿಲ್ಲ. ಆದ್ದರಿಂದ ಸಂಸ್ಥೆಯ ಆಡಳಿತದ ಹಿತದೃಷ್ಟಿಯಿಂದ ಆಡಳಿತಾಧಿಕಾರಿ ಅವಧಿಯನ್ನು ದಿನಾಂಕ:23-09-2005 ರಿಂದ ಮುಂದಿನ 6 ತಿಂಗಳ ಅವಧಿಗೆ ಆಡಳಿತಾಧಿಕಾರಿಯವರ ಅವಧಿಯನ್ನು ವಿಸ್ತರಿಸಲು ಸರ್ಕಾರವು ತೀರ್ಮಾನಿಸಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 47 ಮುನೊಸೊ 2002, ಬೆಂಗಳೂರು, ದಿನಾಂಕ: 12ನೇ ಡಿಸೆಂಬರ್, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಶ್ರೀ ಭಾವಸಾರ ಕ್ಷತ್ರಿಯ ಸಮಾಜ, ಹೊಸಪೇಟೆ, ಬಳ್ಳಾರಿ ಜಿಲ್ಲೆ, ಈ ಸಂಘಕ್ಕೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27-ಎ (1)(ಸಿ)ನಲ್ಲಿ ನಿಹಿತವಾಗಿರುವ ಅಧಿಕಾರವನ್ನು ಚಲಾಯಿಸಿ ಉಪ ವಿಭಾಗಾಧಿಕಾರಿಗಳು, ಬಳ್ಳಾರಿ ಉಪ ವಿಭಾಗ, ಬಳ್ಳಾರಿ ಜಿಲ್ಲೆ ಇವರನ್ನು ಆಡಳಿತಾಧಿಕಾರಿಯನ್ನಾಗಿ ನೇಮಕ ಮಾಡಿದ್ದು, ಸದರಿ ಅವಧಿಯು ದಿನಾಂಕ:22-09-2005 ಕ್ಕೆ ಮುಕ್ತಾಯಗೊಂಡಿರುವುದರಿಂದ ದಿನಾಂಕ:23-09-2005ರಿಂದ ಮತ್ತೆ 6 ತಿಂಗಳ ಅವಧಿಗೆ ಅಥವಾ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸುವವರೆಗೆ ಅಥವಾ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಆಡಳಿತಾಧಿಕಾರಿ ಅವಧಿಯನ್ನು ವಿಸ್ತರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ. ಜಯಚಂದ್ರ**

ಪಿ.ಆರ್.1731

ಪೀಠಾಧಿಕಾರಿ,

ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ).

**ವಿಷಯ :** ಶ್ರೀ ಸಿದ್ದರಾಮೇಶ್ವರ ವಿದ್ಯಾ ಸಂಸ್ಥೆ, ಬೇವೂರು, ಚನ್ನಪಟ್ಟಣ ತಾಲ್ಲೂಕು ಈ ಸಂಸ್ಥೆಗೆ ನೇಮಕ ಮಾಡಲಾಗಿರುವ ಆಡಳಿತಾಧಿಕಾರಿಗಳ ಅವಧಿಯನ್ನು ವಿಸ್ತರಿಸಿ ಆದೇಶಿಸುವ ಕುರಿತು.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ:ಕಂಇ 50 ಮುನೊಸೊ 2002, ದಿನಾಂಕ:21–04–2003.

2. ಸರ್ಕಾರಿ ಆದೇಶ ಸಂಖ್ಯೆ:ಕಂಇ 50 ಮುನೊಸೊ 2002, ದಿನಾಂಕ:16–09–2005.

3. ಆಡಳಿತಾಧಿಕಾರಿಗಳು ಶ್ರೀ ಸಿದ್ದರಾಮೇಶ್ವರ ವಿದ್ಯಾ ಸಂಸ್ಥೆ, ಬೇವೂರು, ಇವರ ಪತ್ರ ಸಂಖ್ಯೆ:ಸಿವಿಸಂ.16/05–06, ದಿನಾಂಕ:15–10–2005.

**ಪ್ರಸ್ತಾವನೆ:**

ಮೇಲೆ ಓದಲಾದ–1ರ ಸರ್ಕಾರಿ ಆದೇಶದಲ್ಲಿ ಶ್ರೀ ಸಿದ್ದರಾಮೇಶ್ವರ ವಿದ್ಯಾ ಸಂಸ್ಥೆ, ಬೇವೂರು, ಈ ಸಂಸ್ಥೆಯ ಅವ್ಯವಹಾರಗಳನ್ನು ಸರಿಪಡಿಸಿ ಸರಿದಾರಿಗೆ ತಂದು, ಸಂಸ್ಥೆಗೆ ಚುನಾವಣೆ ನಡೆಸಿ, ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸಲು ಆದೇಶಿಸಿ ನೇಮಕ ಮಾಡಲಾಗಿರುವ ಆಡಳಿತಾಧಿಕಾರಿ ಅವಧಿಯನ್ನು ಕಾಲಕಾಲಕ್ಕೆ ವಿಸ್ತರಿಸಿಕೊಂಡು ಬರಲಾಗುತ್ತಿದೆ. ಮೇಲೆ–2ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ವಿಸ್ತರಿಸಲಾಗಿದ್ದ, ಆಡಳಿತಾಧಿಕಾರಿ ಅವಧಿಯು ದಿನಾಂಕ:20–10–2005 ಕ್ಕೆ ಮುಕ್ತಾಯಗೊಂಡಿರುತ್ತದೆ.

ಮೇಲೆ ಓದಲಾದ–3 ರ ಪತ್ರದಲ್ಲಿ ಆಡಳಿತಾಧಿಕಾರಿಗಳು, ಸಂಸ್ಥೆಯ ಹಿಂದಿನ ಕಾರ್ಯದರ್ಶಿಗಳಿಗೆ ಮೇಲ್ಕಂಡ ಸಂಸ್ಥೆಯ ಲೆಕ್ಕಪತ್ರಗಳು ಹಾಗೂ ಸಂಬಂಧಿಸಿದ ದಾಖಲಾತಿಗಳನ್ನು ದಿನಾಂಕ: 18–10–2005 ರೊಳಗೆ ತಂದೊಪ್ಪಿಸುವಂತೆ ಇಲ್ಲದಿದ್ದಲ್ಲಿ ಕಾನೂನು ಕ್ರಮ ಕೈಗೊಳ್ಳಲಾಗುವುದೆಂದು ತಿಳಿಸಿ ದಿನಾಂಕ:07–10–2005 ರಂದು ಪತ್ರ ಬರೆಯಲಾಗಿದೆ. ಸಂಸ್ಥೆಯಲ್ಲಿನ ಲೆಕ್ಕಪತ್ರ ಹಾಗೂ ಹಣಕಾಸಿನ ಅವ್ಯವಹಾರಗಳನ್ನು ಸರಿಪಡಿಸಿ ನಿಯಮಾನುಸಾರ ಚುನಾವಣೆ ನಡೆಸಿ ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸಲು ಸಾಕಷ್ಟು ಕಾಲಾವಕಾಶ ಬೇಕಾಗಿದೆ ಆದ್ದರಿಂದ ಆಡಳಿತಾಧಿಕಾರಿ ಅವಧಿಯನ್ನು ಪುನ: ವಿಸ್ತರಿಸುವಂತೆ ಕೋರಿರುತ್ತಾರೆ.

ಆಡಳಿತಾಧಿಕಾರಿಯವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ಆಡಳಿತಾಧಿಕಾರಿ ಅವಧಿಯನ್ನು ವಿಸ್ತರಿಸಲು ಸರ್ಕಾರವು ತೀರ್ಮಾನಿಸಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಕಂಇ 50 ಮುನೊಸೊ 2003, ಬೆಂಗಳೂರು, ದಿನಾಂಕ: 28ನೇ ನವೆಂಬರ್, 2005.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಸಿದ್ದರಾಮೇಶ್ವರ ವಿದ್ಯಾ ಸಂಸ್ಥೆ, ಬೇವೂರು, ಚನ್ನಪಟ್ಟಣ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಈ ಸಂಘಕ್ಕೆ ಸಾರ್ವಜನಿಕ ಹಿತದೃಷ್ಟಿಯಿಂದ ಕರ್ನಾಟಕ ಸಂಘಗಳ ನೋಂದಣಿ

ಕಾಯ್ದೆ 1960 ರ ಕಲಂ–27ಎ ಪ್ರಕಾರ ನೇಮಕ ಮಾಡಲಾಗಿದ್ದ, ಆಡಳಿತಾಧಿಕಾರಿಗಳ ಅವಧಿಯನ್ನು ದಿನಾಂಕ:21–10–2005 ರಿಂದ ಮುಂದಿನ 6 ತಿಂಗಳ ಅವಧಿಯವರೆಗೆ ಅಥವಾ ಸಂಸ್ಥೆಗೆ ನಿಯಮಾನುಸಾರ ಚುನಾವಣೆ ನಡೆಸಿ, ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸುವವರೆಗೆ ಅಥವಾ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ವಿಸ್ತರಿಸಿ ಆದೇಶಿಸಿದೆ.

ಆಡಳಿತಾಧಿಕಾರಿಯವರು ಈ ಅವಧಿಯೊಳಗೆ ಸಂಘದ ಅವ್ಯವಹಾರಗಳನ್ನು ಸರಿಪಡಿಸಿ, ಸಂಘಕ್ಕೆ ನಿಯಮಾನುಸಾರ ಚುನಾವಣೆ ನಡೆಸಿ, ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ. ಜಯಚಂದ್ರ**

ಪಿ.ಆರ್.1683 ಪೀಠಾಧಿಕಾರಿ,

ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ).

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಆರ್.ಎಂ.ಬಸವರಾಜಪ್ಪ, ಸಿಹೆಚ್‌ಸಿ-316, ದಾವಣಗೆರೆ ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ, ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ದಾವಣಗೆರೆ ಜಿಲ್ಲೆ, ಇವರ ಆದೇಶ ಸಂಖ್ಯೆ:ಇವಿ/9/98-99. ಓಬಿ ಸಂ:437/99-2000, ದಿನಾಂಕ:16-02-2000.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಪೂರ್ವ ವಲಯ, ದಾವಣಗೆರೆ ಇವರ ಆದೇಶ ಸಂಖ್ಯೆ:ಅಪೀಲು-80/99-2000 ದಿನಾಂಕ:15-10-2001.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:01-02-2002.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು,ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/1/1/2002-03, ದಿನಾಂಕ:17-11-2002.

**ಪ್ರಸ್ತಾವನೆ:**

ಶ್ರೀ ಆರ್.ಎಂ.ಬಸವರಾಜಪ್ಪ, ಸಿಹೆಚ್‌ಸಿ 316, ದಾವಣಗೆರೆ ಜಿಲ್ಲೆ, ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

"ದಿನಾಂಕ:20-11-1997ರಂದು ಮಧ್ಯಾಹ್ನ 3 ಗಂಟೆಗೆ ದಾವಣಗೆರೆ ಗ್ರಾಮಾಂತರ ವಲಯದ ಸಿ.ಪಿ.ಐ. ರವರು ದಾವಣಗೆರೆ ನಗರದ ಶಾಮನೂರು ರಸ್ತೆಯಲ್ಲಿರುವ ನಾಗೇಂದ್ರಪ್ಪ ರವರ ಬಾಟಲಿ ಬಿಲ್ಡಿಂಗ್‌ನ ಡೋರ್ ನಂ.1776/57 (ಎ) ನೇದ್ದರ 3ನೇ ಮಹಡಿ ಕಟ್ಟಡದಲ್ಲಿ ದಾಳಿ ನಡೆಸಿದಾಗ ಅಲ್ಲಿ ನೀವು ಜೂಜಾಟದಲ್ಲಿ ತೊಡಗಿದ್ದುದು ಕಂಡು ಬಂದಿದ್ದು ಆದ ಕಾರಣ ನಿಮ್ಮನ್ನು ದಸ್ತಗಿರಿ ಮಾಡಿ ದಾವಣಗೆರೆ ಗ್ರಾಮಾಂತರ ಪೊಲೀಸ್ ಠಾಣಾ ಗುನ್ನೆ ನಂ.542/97 ಕಲಂ.79, 80 ಕಾ.ಪೋ.ಕಾಯ್ದೆ ಪ್ರಕಾರ ಪ್ರಕರಣ ದಾಖಲಿಸಿಕೊಳ್ಳಲಾಗಿದೆ. ಶಿಸ್ತಿನ ಇಲಾಖೆಯ ನೌಕರರಾದ ನೀವು ಜೂಜಾಟದಲ್ಲಿ ತೊಡಗಿ ಮೊಕದ್ದಮೆಯಲ್ಲಿ ಆರೋಪಿಯಾಗಿ ಈ ಮೂಲಕ ತೀವ್ರಅಶಿಸ್ತು ಹಾಗೂ ದುರ್ನಡತೆ ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ದಾವಣಗೆರೆ ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ:16-02-2000ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾ ಮಾಡಿರುತ್ತಾರೆ.

ಈ ಆದೇಶದ ವಿರುದ್ಧ, ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಪೂರ್ವ ವಲಯ, ದಾವಣಗೆರೆ ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲದಿದ್ದರೂ ಅರ್ಜಿದಾರರ ಮೇಲ್ಮನವಿಯನ್ನು ಮಾನವೀಯ ದೃಷ್ಟಿಯಿಂದ ಪರಿಗಣಿಸಿ, ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ:15-10-2001ರ ಆದೇಶದಲ್ಲಿ ಮೇಲ್ಮನವಿಯನ್ನು ಪುರಸ್ಕರಿಸಿ, ಅರ್ಜಿದಾರರನ್ನು ಸೇವೆಗೆ ಪುನರ್‌ನೇಮಕ ಮಾಡಿ, ಅವರ ಮೂರು ವಾರ್ಷಿಕ ವೇತನ ಬಡ್ತಿಗಳನ್ನು ಮುಂದಿನ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಎರಡು ಆದೇಶಗಳ ವಿರುದ್ದ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಸಾರ್ವಜನಿಕರೊಡನೆ ಜೂಜಾಟದಲ್ಲಿ ತೊಡಗಿದ್ದು, ದಸ್ತಗಿರಿ ಮಾಡಿ ಗುನ್ನೆ ಸಂ:542/97 ಕಲಂ 79, 80, ಕೆ.ಪಿ.ಆಕ್ಟ್ ಕ್ರಿಮಿನಲ್ ಮೊಕದ್ದಮೆ ದಾಖಲಾಗಿ, ದಾವಣಗೆರೆ ಜೆಎಂಎಫ್‌ಸಿ ನ್ಯಾಯಾಲಯದಲ್ಲಿ CC ನಂ.414/98ರಲ್ಲಿ 04-07-2002ರಲ್ಲಿ ಅರ್ಜಿದಾರರನ್ನು ದೋಷಮುಕ್ತಗೊಳಿಸಿರುತ್ತದೆ. ಈ ಹಿನ್ನೆಲೆಯಲ್ಲಿ ಸರ್ಕಾರಿ ಸುತ್ತೋಲೆ ಸಂಖ್ಯೆ:ಸಿಆಸುಇ 9 ಸೇಇವಿ 95 ದಿನಾಂಕ:26-06-1996ರ ಕಂಡಿಕೆ 3ರನ್ವಯ ಮೇಲ್ಮನವಿ ಪ್ರಾಧಿಕಾರಿಯ ಆದೇಶವನ್ನು ಪರಿಷ್ಕರಿಸಿ, ವಾರ್ಷಿಕ ವೇತನ ಬಡ್ತಿಗಳನ್ನು ಸಕ್ರಮಗೊಳಿಸಲು ಹಾಗೂ ಅಮಾನತ್ತಿನ ಅವಧಿಯನ್ನು ಹಾಗೂ ಸೇವೆಯಿಂದ ಹೊರಗುಳಿದ ಅವಧಿಯನ್ನು ಕರ್ತವ್ಯವೆಂದು ಪರಿಗಣಿಸುವಂತೆ ಕೋರಿರುತ್ತಾರೆ. ಸದರಿ ಸುತ್ತೋಲೆ ದಿನಾಂಕ:26-06-1996 ರನ್ವಯ ನ್ಯಾಯಾಲಯದಲ್ಲಿ ಆಪಾದಿತ ಸರ್ಕಾರಿ

ನೌಕರನು ಖುಲಾಸೆ (acquit) ಆದರೆ, ಶಿಸ್ತು ಪ್ರಾಧಿಕಾರಿಯ ಆದೇಶವನ್ನು ಪರಿಷ್ಕರಿಸಬಹುದೆಂದಿರುತ್ತದೆ. ಆದರೆ, ನ್ಯಾಯಾಲಯದ ಆದೇಶಕ್ಕೆ ಮುಂಚೆಯೇ ಮೇಲ್ಮನವಿ ಪ್ರಾಧಿಕಾರಿ ಅರ್ಜಿದಾರರ ಕುಟುಂಬ ಸ್ಥಿತಿಯನ್ನು ಗಮನದಲ್ಲಿಟ್ಟುಕೊಂಡು, ಸಹಾನುಭೂತಿಯಿಂದ ಇಲಾಖಾ ವಿಚಾರಣೆಯಲ್ಲಿ ಆರೋಪ ಸಾಬೀತಾಗಿದ್ದರೂ, ಸೇವೆಗೆ ಪುನರ್‌ನೇಮಕ ಮಾಡಿ, ಲಘು ದಂಡನೆ, ವಿಧಿಸಿರುವ ಹಿನ್ನೆಲೆಯಲ್ಲಿ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಲು ಯಾವುದೇ ಹೊಸ ಅಂಶಗಳಿಲ್ಲವೆಂದು ಪರಿಗಣಿಸಿದೆ. ಆದ್ದರಿಂದ, ಮೇಲ್ಮನವಿ ಪ್ರಾಧಿಕಾರಿಯು ವಿಧಿಸಿರುವ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 42 ಪೊಸಿಅ 2002, ಬೆಂಗಳೂರು, ದಿನಾಂಕ: 3ನೇ ಡಿಸೆಂಬರ್, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ)ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಆರ್.ಎಂ.ಬಸವರಾಜಪ್ಪ, ಸಿಹೆಚ್‌ಸಿ 316, ದಾವಣಗೆರೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:01-02-2002ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಕೆ. ಗುಂಡೂರಾವ್**

ಪಿ.ಆರ್.1703

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**ವಿಷಯ:** ಶ್ರೀ ಸಂಜೀವಯ್ಯ, ಪಿಸಿ 2088, ಶಿವಾಜಿನಗರ ಪೊಲೀಸ್ ಠಾಣೆ, ಬೆಂಗಳೂರು ರವರು ಸರ್ಕಾರಕ್ಕೆ ಸಲ್ಲಿಸಿರುವ, ಪರಿಷ್ಕರಣ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಆಯುಕ್ತರು, ಪೂರ್ವ ವಿಭಾಗ, ಬೆಂಗಳೂರು ನಗರ ಇವರ ಆದೇಶ ಸಂಖ್ಯೆ:ಡಿಇ/ಆರ್-6/16/ 2002-03, ದಿನಾಂಕ:10-04-2003.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಜಂಟಿ ಪೊಲೀಸ್ ಕಮೀಷನರ್, ಆಡಳಿತ ಬೆಂಗಳೂರು ನಗರ ಇವರ ಆದೇಶ ಸಂಖ್ಯೆ:12/ಅಪೀಲು/2004, ದಿನಾಂಕ:13-01-2005.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:18-02-2005.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು,ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/45/ 2005, ದಿನಾಂಕ:09-09-2005.

**ಪ್ರಸ್ತಾವನೆ:**

ಶ್ರೀ ಸಂಜೀವಯ್ಯ, ಪಿಸಿ 2088, ಶಿವಾಜಿನಗರ ಪೊಲೀಸ್ ಠಾಣೆ, ಬೆಂಗಳೂರು ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

"ಪಿಸಿ 2088, ಸಂಜೀವಯ್ಯ, ಶಿವಾಜಿನಗರ ಪೊಲೀಸ್ ಠಾಣೆ, ಆದ ನೀವು ದಿನಾಂಕ:23-08-2002ರಿಂದ ಠಾಣೆಗೆ ಯಾವುದೇ ಮುನ್ಸೂಚನೆ ನೀಡದೆ, ಮೇಲಧಿಕಾರಿಗಳಿಂದ ರಜೆ ಮಂಜೂರು ಮಾಡಿಸಿಕೊಳ್ಳದೆ, ಕೆಲಸಕ್ಕೆ ಅನಧಿಕೃತವಾಗಿ ಗೈರುಹಾಜರಾಗಿ, ಠಾಣೆಯ ಸರಹದ್ದಿನಲ್ಲಿ ತಿರುಗಾಡುತ್ತಿದ್ದೀರಿ. ನಿಮಗೆ ಈ ಹಿಂದೆ ಗೈರುಹಾಜರಾಗದಂತೆ, ಪೊಲೀಸ್ ಇನ್ಸ್‌ಪೆಕ್ಟರ್ ರವರು ಎಚ್ಚರಿಕೆ ನೀಡಿದ್ದರೂ ಸಹ, ನೀವು ಪದೇ ಪದೇ ಕೆಲಸಕ್ಕೆ ಗೈರುಹಾಜರಾಗುವ ಅಭ್ಯಾಸವನ್ನು ಬೆಳೆಸಿಕೊಂಡು, ನಿಮ್ಮ ಕರ್ತವ್ಯದಲ್ಲಿ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿಯನ್ನು ತೋರಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿದಾಗ ಅರ್ಜಿದಾರರು ತನ್ನ ಮೇಲಿನ ಆರೋಪ ಒಪ್ಪಿಕೊಂಡು, ಕಡ್ಡಾಯ ನಿವೃತ್ತಿಗೊಳಿಸಲು ಕೋರಿದ್ದು, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಆಯುಕ್ತರು, ಪೂರ್ವ ವಲಯ, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ:10-04-2003ರ ಆದೇಶದಲ್ಲಿ ಅರ್ಜಿದಾರರನ್ನು ಕಡ್ಡಾಯ ನಿವೃತ್ತಿಗೊಳಿಸಿರುತ್ತಾರೆ.

ಈ ಆದೇಶದ ವಿರುದ್ಧ, ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಜಂಟಿ ಪೊಲೀಸ್ ಕಮೀಷನರ್, ಆಡಳಿತ ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ:13-01-2005ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡು ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪೊಲೀಸ್ ಇಲಾಖೆಯ ಒಂದು ಶಿಸ್ತಿನ ಇಲಾಖೆಯಾಗಿದ್ದು, ಅನಧಿಕೃತ ಗೈರುಹಾಜರಿಯನ್ನು ತೀವ್ರವಾಗಿ ಪರಿಗಣಿಸಬೇಕಾಗಿರುತ್ತದೆ. ಸರ್ಕಾರಿ ಸುತ್ತೋಲೆ ಸಂಖ್ಯೆ:ಸಿಆಸುಇ 18 ಸೇಇವಿ 2001 ದಿನಾಂಕ:14-09-2001 ರನ್ವಯ 4 ತಿಂಗಳಿಗೂ ಮೀರಿದ ಅನಧಿಕೃತ ಗೈರುಹಾಜರಿಗೆ ಸೇವೆಯಿಂದ ತೆಗೆದುಹಾಕುವ ಶಿಕ್ಷೆ ವಿಧಿಸಬೇಕಾಗಿದ್ದರೂ ಮಾನವೀಯ ದೃಷ್ಟಿಯಿಂದ ಶಿಸ್ತು ಪ್ರಾಧಿಕಾರಿ ಕಡ್ಡಾಯ ನಿವೃತ್ತಿಗೊಳಿಸಿದೆ ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 84 ಪೊಸಿಅ 2005, ಬೆಂಗಳೂರು, ದಿನಾಂಕ:30ನೇ ನವೆಂಬರ್, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಸಂಜೀವಯ್ಯ, ಪಿಸಿ 2088 ಶಿವಾಜಿನಗರ ಪೊಲೀಸ್ ಠಾಣೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:18-02-2005ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಕೆ. ಗುಂಡೂರಾವ್**

ಪಿ.ಆರ್.1704 ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**ವಿಷಯ:** ಶ್ರೀ ಚಿತ್ರಶೇಖರ, ಎಪಿಸಿ 447, ಡಿಎಆರ್., ಗುಲ್ಬರ್ಗಾ ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ, ಪರಿಷ್ಕರಣ ಅರ್ಜಿಯ ಬಗ್ಗೆ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಗುಲ್ಬರ್ಗಾ ಇವರ ಆದೇಶ ಸಂಖ್ಯೆ:ಇವಿ/17/86/ ದಿನಾಂಕ:26-03-1987.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಈಶಾನ್ಯ ವಲಯ, ಕಲಬುರ್ಗಿ ಇವರ ಆದೇಶ ಸಂಖ್ಯೆ:ಅಪೀಲು/43/ಈವ/87 ದಿನಾಂಕ:05-12-1987.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:19-06-2002.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು,ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/34/ 2002-03, ದಿನಾಂಕ:05-07-2004.

**ಪ್ರಸ್ತಾವನೆ:**

ಶ್ರೀ ಚಿತ್ರಶೇಖರ್, ಎಪಿಸಿ 447, ಡಿಎಆರ್, ಗುಲ್ಬರ್ಗಾ ಜಿಲ್ಲೆ, ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

"1)ದಿನಾಂಕ:25-02-86 ರಿಂದ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಿ ಆಗಿ ನಿಯಮ 106 (ಎ) ಕೆಸಿಎಸ್‌ನ್ನು ಉಲ್ಲಂಘಿಸಿದ ಬಗ್ಗೆ."

" 2) ಮೇಲಾಧಿಕಾರಿಗಳು ನೀಡಿದ ಕಾನೂನು ಸಮ್ಮತವಾದ ಆದೇಶವನ್ನು ಮೀರಿದ ಬಗ್ಗೆ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ಅರ್ಜಿದಾರರು ತಮ್ಮ ಮೌಖಿತ ಹೇಳಿಕೆಯಲ್ಲಿ ತಮ್ಮ ವಿರುದ್ದ ಸೂಚಿಸಿದ ಆರೋಪವನ್ನು ಬೇಷರತ್ತಾಗಿ ಒಪ್ಪಿಕೊಂಡ ಹಿನ್ನೆಲೆಯಲ್ಲಿ, ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಗುಲ್ಬರ್ಗಾ ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ:26-03-1987ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾ ಮಾಡಿ, ಅನಧೀಕೃತ ಗೈರು ಹಾಜರಿ ದಿನಗಳನ್ನು ವೇತನ ರಹಿತ ರಜೆ ಎಂದು ಪರಿಗಣಿಸಿರುತ್ತಾರೆ.

ಈ ಆದೇಶದ ವಿರುದ್ಧ, ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಉಪ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಕಲಬುರ್ಗಿ ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲದಿದ್ದರೂ ಅರ್ಜಿದಾರರು ಪುನ: ಕಾಳಜೀಪೂರ್ವಕವಾಗಿ ಸೇವೆ ಸಲ್ಲಿಸುವುದಾಗಿ ತಿಳಿಸಿದ್ದರಿಂದ ಮೇಲ್ಮನವಿಯನ್ನು ಪುರಸ್ಕರಿಸಿ ಮೇಲೆ ಕ್ರಮ ಸಂಖ್ಯೆ: (2) ರಲ್ಲಿ ಓದಲಾದ ದಿನಾಂಕ:05-12-87ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಗೆ ಪುನರ್ ನೇಮಕ ಮಾಡಿ, ಅವರ ವೇತನವನ್ನು ಪಿಸಿ ಹುದ್ದೆಯ ವೇತನ ಶ್ರೇಣಿಯ ಕನಿಷ್ಟ ಮಟ್ಟಕ್ಕೆ 10 ವರ್ಷಗಳ ಅವಧಿಗೆ ಇಳಿಸಿ, ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಅನ್ವಯಿಸುವಂತೆ ಶಿಕ್ಷೆ ವಿಧಿಸಿರುತ್ತಾರೆ.

ಈ ಎರಡು ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರೇ ತಮ್ಮ ತಪ್ಪನ್ನು ಬೇಷರತ್ತಾಗಿ ಒಪ್ಪಿಕೊಂಡಿದ್ದರೂ, ಮಾನವೀಯ ದೃಷ್ಟಿಯಿಂದ ಮೇಲ್ಮನವಿ ಪ್ರಾಧಿಕಾರಿಯು ಶಿಸ್ತು ಪ್ರಾಧಿಕಾರಿಯ ಆದೇಶವನ್ನು ಮಾರ್ಪಡಿಸಿ, ಅರ್ಜಿದಾರರನ್ನು ಸೇವೆಗೆ ಪುನರ್ ನೇಮಕ ಮಾಡಿರುತ್ತಾರೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ್ದರೂ ಸೇವೆಗೆ ಪುನರ್ ನೇಮಕ ಮಾಡಿರುವ ಕಾರಣ ಮೇಲ್ಮನವಿ ಪ್ರಾಧಿಕಾರಿಯು ವಿಧಿಸಿರುವ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 121 ಪೊಸಿಅ 2002, ಬೆಂಗಳೂರು, ದಿನಾಂಕ:30ನೇ ನವೆಂಬರ್, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ)ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಚಿತ್ರಶೇಖರ್, ಎಪಿಸಿ 447, ಡಿಎಆರ್ ಗುಲ್ಬರ್ಗಾ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:19-06-2002ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಕೆ. ಗುಂಡೂರಾವ್**

ಪಿ.ಆರ್.1705 ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**ವಿಷಯ:** ಶ್ರೀ ಎನ್.ಬಸವರಾಜು, ಸಿಪಿಸಿ 237, ತರೀಕೆರೆ ಪೊಲೀಸ್ ಠಾಣೆ, ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಚಿಕ್ಕಮಗಳೂರು ಜಿಲ್ಲೆ ಇವರ ಆದೇಶ ಸಂಖ್ಯೆ: ಪನ್ಸಿ/ಸಿಐಆರ್-7/98-99, ಓಬಿ ಸಂಖ್ಯೆ:98/2002, ಮತ್ತು ಓಬಿ ಸಂಖ್ಯೆ:130/2004, ದಿನಾಂಕ:05-06-2002, ಮತ್ತು 21-06-2004.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪಶ್ಚಿಮ ವಲಯ, ಮಂಗಳೂರು, ಇವರ ಆದೇಶ ಸಂಖ್ಯೆ: ಸಿಬ್ಬಂದಿ ಮೇಲ್ಮನವಿ/3-4/2002-03 ಮತ್ತು ಸಿಬ್ಬಂದಿ/ಮೇಲ್ಮನವಿ-3/2004-05, ದಿನಾಂಕ:05-08-2003. ಮತ್ತು 28-02-2005.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:16-05-2005.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/82/2005, ದಿನಾಂಕ:10-08-2005.

**ಪ್ರಸ್ತಾವನೆ:**

ಶ್ರೀ ಎನ್.ಬಸವರಾಜು ಸಿಪಿಸಿ 237 ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ದೋಷರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6 ಮತ್ತು 8 ರಡಿ ಜಂಟಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

"1) ಸಿಪಿಸಿ 237 ಎನ್.ಬಸವರಾಜು ಮತ್ತು ಸಿಹೆಚ್‌ಸಿ 127 ಭೀಮಾನಾಯ್ಕ ರವರುಗಳು ಈ ಹಿಂದೆ ತರೀಕೆರೆ ಪೊಲೀಸ್ ಠಾಣೆಯಲ್ಲಿ ಕರ್ತವ್ಯನಿರ್ವಹಿಸುತ್ತಿದ್ದಾಗ, ದಿನಾಂಕ:02-06-91ರಂದು ನಿಮ್ಮಗಳಿಗೆ ರಾತ್ರಿಗಸ್ತಿನ ಕರ್ತವ್ಯಕ್ಕೆ ನೇಮಿಸಿದ್ದು, ನೀವುಗಳು ರಾತ್ರಿ ಕರ್ತವ್ಯಕ್ಕೆ ಹೋಗದೆ, ಮೋಹನ್ ಬಾರ್‌ನಲ್ಲಿ ಮದ್ಯವನ್ನು ಕುಡಿಯುತ್ತಿದ್ದಾಗ, ಸದರಿ ಬಾರ್‌ನಲ್ಲಿ ಗಲಾಟೆಯಾಗುತ್ತಿದ್ದರೂ ಸಹ, ಸಾಕ್ಷಿದಾರರು ಗಲಾಟೆಯನ್ನು ಸಮಾಧಾನ ಪಡಿಸಿ ಎಂದು ಹೇಳಿದರೂ ಸಹ ಗಲಾಟೆಯನ್ನು ಶಮನ ಮಾಡದೆ ಕರ್ತವ್ಯ ಲೋಪವೆಸಗಿರುತ್ತೀರಿ.

2) ಆಪಾದಿತ ಪೊಲೀಸ್ ಅಧಿಕಾರಿಗಳಾದ ನೀವುಗಳು ದಿನಾಂಕ:02-06-91ರಂದು ರಾತ್ರಿ ಸುಮಾರು 01-00 ಗಂಟೆಯಲ್ಲಿ, ನಿಮಗೆ ರಾತ್ರಿ ಗಸ್ತಿನ ಕರ್ತವ್ಯಕ್ಕೆ ನೇಮಕವಾಗಿದ್ದು, ಶಿಸ್ತಿನ ಕರ್ತವ್ಯಕ್ಕೆ ಹೋಗದೆ, ಮೋಹನ್ ಬಾರ್‌ನಲ್ಲಿ ಕುಡಿದಿದ್ದಲ್ಲದೆ, ಬಾರ್‌ನಲ್ಲಿಯೇ ಗಲಾಟೆಯಾದರೂ ಸಹ ಸಮಾಧಾನ ಮಾಡದೆ ಹಾಗೂ ಮೇಲಾಧಿಕಾರಿಗಳಿಗೆ ತಿಳಿಸದೆ, ಬಾರ್‌ನಿಂದ ಸುಮಾರು 30 ಅಡಿ ದೂರದಲ್ಲಿ ಸೇತುವೆಯ ಮೇಲೆ ಕುಳಿತುಕೊಂಡಿದ್ದು, ಮತ್ತು ಸದರಿ ಬಾರ್‌ನಲ್ಲಿ ಗಲಾಟೆಯಾಗುತ್ತಿದೆ ಎಂದು ಬಾರ್‌ನಲ್ಲಿದ್ದ ಕೆಲಸದ ಹುಡುಗರು ಹೇಳಿದ್ದರೂ ಕೂಡ, ರೌಡಿಗಳು ಹೊಡೆದಾಡಿಕೊಂಡು ಸಾಯಲಿ ಎಂದು ಬಾರ್‌ನಲ್ಲಿ ಗಲಾಟೆಯಾಗುತ್ತಿದ್ದರೂ ಸಹ ಹೋಗದೆ ಜಯಸ್ವಾಮಿ ಕೊಲೆಗೆ ನೇರವಾಗಿ ನೀವುಗಳು ಕಾರಣರಾಗಿ ಕರ್ತವ್ಯ ಲೋಪವೆಸಗಿದ್ದೀರಿ.

3) ಆಪಾದಿತ ಪೊಲೀಸ್ ಅಧಿಕಾರಿಗಳಾದ ನೀವಿಬ್ಬರೂ ದಿನಾಂಕ:03-06-91ರಂದು ನಡೆದ ವಿಚಾರ ಗೊತ್ತಿದ್ದರೂ ಸಹ, ಕೊಲೆಯಾದ ಜಯಸ್ವಾಮಿಯ ಕೊಲೆ ಬಗ್ಗೆ ಸಾಕ್ಷ್ಯಾಧಾರವನ್ನು ಮರೆಮಾಚಿ, ಆಕ್ಸಿಡೆಂಟ್ ಆಗಿರುತ್ತದೆಂದು ತರೀಕೆರೆ ಠಾಣಾಧಿಕಾರಿಯವರಿಗೆ ಮತ್ತು ಮೇಲಧಿಕಾರಿಯವರಿಗೆ ಸುಳ್ಳು ಹೇಳಿಕೆ ನೀಡಿ ವಿಚಾರಣೆಯ ದಾರಿ ತಪ್ಪಿಸಿ, ಪೊಲೀಸ್ ಇಲಾಖೆಯ ಘನತೆಗೆ ಕುಂದುಂಟಾಗುವಂತೆ ಮಾಡಿ, ಆ ದಿವಸ ತರೀಕೆರೆ ಪಟ್ಟಣದಲ್ಲಿ ಅಶಾಂತಿ ಉಂಟಾಗಲು ನೀವುಗಳು ಕಾರಣರಾಗಿ ಕರ್ತವ್ಯ ಲೋಪವೆಸಗಿರುತ್ತೀರಿ.

4) ಆಪಾದಿತ ಪೊಲೀಸ್ ಅಧಿಕಾರಿಗಳಾದ ನೀವಿಬ್ಬರೂ ತರೀಕೆರೆ ಪೊಲೀಸ್ ಠಾಣೆಯ ಮೊ.ಸಂಖ್ಯೆ:102/91 ಕಲಂ 302, 120 (ಬಿ) 193, 182, 506/176,201 IPC ಪ್ರಕರಣದ ಆರೋಪಿಗಳಾಗಿದ್ದು, ಅಲ್ಲದೆ, ಈ ಪ್ರಕರಣವನ್ನು COD ರವರು ತನಿಖೆ ನಡೆಸುತ್ತಿರುವುದನ್ನು ತಿಳಿದು ದಿನಾಂಕ:24-10-1991 ರಿಂದ ತಲೆ ಮರೆಸಿಕೊಂಡಿದ್ದು, ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಿಯಾಗಿ ನೀವು ಕರ್ತವ್ಯ ಚ್ಯುತಿ ಹಾಗೂ ದುರ್ನಡತೆಯನ್ನು ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಅಂಶಿಕವಾಗಿ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಚಿಕ್ಕಮಗಳೂರು ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ:05-06-2002ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ತದನಂತರ ಗಳಿಸುವ ವಾರ್ಷಿಕ ವೇತನ ಬಡ್ತಿಗೆ ಪರಿಣಾಮ ಬೀರುವಂತೆ ಐದು ವರ್ಷಗಳ ಅವಧಿಗೆ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ್ದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಪಶ್ಚಿಮ ವಲಯ, ಮಂಗಳೂರು ಇವರು ಇಲಾಖಾ ವಿಚಾರಣೆಯಲ್ಲಿ ನ್ಯೂನತೆ ಕಂಡು ಬರುತ್ತಿರುವ ಕಾರಣ, ಶಿಸ್ತು ಪ್ರಾಧಿಕಾರಿ ಆದೇಶವನ್ನು ರದ್ದುಪಡಿಸಿ, ಜಂಟಿ ಇಲಾಖಾ ವಿಚಾರಣೆಯಲ್ಲಿ ನ್ಯೂನತೆ ಕಂಡು ಬಂದ ಹಂತದಿಂದ ಅಂದರೆ, ಶಿಸ್ತು ಪಾಲನಾಧಿಕಾರಿಯ ಮುಂದುವರಿದ ನಿರ್ಣಯ ಬರೆದು ಹೊರಡಿಸುವ ಹಂತದಿಂದ ನ್ಯೂನತೆಗಳನ್ನು ಸರಿಪಡಿಸಿಕೊಂಡು, ಇಲಾಖಾ ವಿಚಾರಣೆಯಲ್ಲಿ ಅಂತಿಮ ಆದೇಶ ಹೊರಡಿಸುವಂತೆ ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ:05-08-2003ರ ಆದೇಶದಲ್ಲಿ ಸೂಚಿಸಿರುತ್ತಾರೆ. ಅದರಂತೆ ಶಿಸ್ತು ಪ್ರಾಧಿಕಾರಿಯು ಶಿಸ್ತು ಪ್ರಕರಣದಲ್ಲಿ ನ್ಯೂನತೆ ಕಂಡು ಬಂದ ಹಂತದಿಂದ ಮುಂದುವರಿದ ನಡವಳಿಗಳು ಹೊರಡಿಸುವ ಮೂಲಕ ಹೊಸದಾಗಿ ಪ್ರಾರಂಭಿಸಿ, ಸಾಕ್ಷ್ಯಾಧಾರಗಳಿಂದ ಆರೋಪ ಸಾಬೀತಾಗಿರುವ ಹಿನ್ನೆಲೆಯಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ಅವರು ಮುಂದೆ ಗಳಿಸುವ ವಾರ್ಷಿಕ ವೇತನ ಬಡ್ತಿಗೆ ಧಕ್ಕೆ ಆಗುವಂತೆ 5 ವರ್ಷಗಳ ಕಾಲ ಮುಂದೂಡಿದ ಶಿಕ್ಷೆಯನ್ನು ದಿನಾಂಕ:21-06-2004ರ ಆದೇಶದಲ್ಲಿ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಅರ್ಜಿದಾರರು ಮೇಲ್ಮನವಿ ಸಲ್ಲಿಸಿದ್ದು, ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಪಶ್ಚಿಮ ವಲಯ, ಮಂಗಳೂರು, ಇವರು ತಮ್ಮ ದಿನಾಂಕ:28-02-2005ರ ಆದೇಶದಲ್ಲಿ ಅರ್ಜಿದಾರರ ಸುದೀರ್ಘ ಸೇವೆಯನ್ನು ಪರಿಗಣಿಸಿ, ಶಿಸ್ತು ಪ್ರಾಧಿಕಾರಿ ಆದೇಶವನ್ನು ಮಾರ್ಪಡಿಸಿ, ಅವರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮೂರು ವರ್ಷಗಳ ಕಾಲ ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆ ಆಗುವಂತೆ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ, ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪೊಲೀಸ್ ಅಧಿಕಾರಿಗಳು ಯಾವುದೇ ಅಪರಾಧಗಳನ್ನು ತಡೆಗಟ್ಟಲು ಅಧಿಕಾರ ಹೊಂದಿದ್ದರೂ ಕೂಡ, ಕಾನೂನು ಸಹ ಇವರಿಂದ ಪ್ರಾಮಾಣಿಕ ಸೇವೆ ಅಪೇಕ್ಷಿಸಿದ್ದರೂ ಕೂಡ, ಆರೋಪಿ ಅರ್ಜಿದಾರರರು ತೀವ್ರತರದ ನಿರ್ಲಕ್ಷತೆಯಿಂದ ಕರ್ತವ್ಯ ಲೋಪ ಎಸಗಿರುವುದು ಕಂಡುಬರುತ್ತದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ್ದು, ಶಿಸ್ತು ಪ್ರಾಧಿಕಾರಿ ಸರಿಯಾದ ದಂಡನೆ ವಿಧಿಸಿದ್ದರೂ, ಮೇಲ್ಮನವಿ ಪ್ರಾಧಿಕಾರಿ ಅರ್ಜಿದಾರರ ಸೇವೆಯನ್ನು ಪರಿಗಣಿಸಿ, ಶಿಸ್ತು ಪ್ರಾಧಿಕಾರಿ ಆದೇಶವನ್ನು ಮಾರ್ಪಡಿಸಿ ಆದೇಶ ಹೊರಡಿಸಿರುವುದರಿಂದ, ಈ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 192 ಪೊಸೆಅ 2005, ಬೆಂಗಳೂರು, ದಿನಾಂಕ:23ನೇ ನವೆಂಬರ್, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೋಲಿಸ್ (ಶಿಸ್ತು ನಡವಳಿ) ನಿಯಮಗಳು, 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎನ್.ಬಸವರಾಜು, ಸಿಪಿಸಿ 237, ತರೀಕೆರೆ ಪೊಲೀಸ್ ಠಾಣೆ, ಇವರು ಸರ್ಕಾರಕ್ಕೆ ದಿನಾಂಕ:16-05-2005ರಂದು ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಕೆ. ಗುಂಡೂರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

ಪಿ.ಆರ್.1706

**ವಿಷಯ:** ಶ್ರೀ ಕೆ.ಶ್ರೀನಿವಾಸ ಮೂರ್ತಿ, ಎಹೆಚ್‌ಸಿ, 663, ಸಿಎಆರ್ (ಕೆ), ಬೆಂಗಳೂರು ನಗರ ರವರು ಸರ್ಕಾರಕ್ಕೆ ಸಲ್ಲಿಸಿರುವ, ಪರಿಷ್ಕರಣ ಮೇಲ್ಮನವಿ ಅರ್ಜಿಯ ಬಗ್ಗೆ.

**ಓದಲಾಗಿದೆ:**

1. ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಆಯುಕ್ತರು, ನಗರ ಸಶಸ್ತ್ರ ಮೀಸಲು ಪಡೆ, ಬೆಂಗಳೂರು, ಇವರ ಆದೇಶ ಸಂಖ್ಯೆ:ಡಿಇ/51/95-96ಆಪು ಸಂಖ್ಯೆ:8/97 ದಿನಾಂಕ:15-05-1997.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್, ಸಿಎಆರ್ ಮತ್ತು ಭದ್ರತಾ ಪಡೆ, ಬೆಂಗಳೂರು ನಗರ ಇವರ ಆದೇಶ ಸಂಖ್ಯೆ:23/ಅಪೀಲು/97-98, ದಿನಾಂಕ:09-03-1998.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:02-06-2004.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು,ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/40/2004, ದಿನಾಂಕ:13-04-2005.

**ಪ್ರಸ್ತಾವನೆ:**

ಶ್ರೀ ಕೆ.ಶ್ರೀನಿವಾಸಮೂರ್ತಿ, ಪಿಸಿ 1329 (ಹಾಲಿ ಹೆಚ್‌ಸಿ 663) ಸಿಎಆರ್ ಕೇಂದ್ರ ಬೆಂಗಳೂರು, ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

"Gross misconduct in that , you PC 1329, K.Srinivasamurthy of `B` Company, misbehaved with your supeior and exhibited misconduct on 31-07-1995."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಆಯುಕ್ತರು, ನಗರ ಸಶಸ್ತ್ರ ಮೀಸಲು ಪಡೆ ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ:15-05-1997ರ ಆದೇಶದಲ್ಲಿ ಅರ್ಜಿದಾರರ ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗೆ ಧಕ್ಕೆ ಆಗುವಂತೆ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ್ದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ, ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್ ಸಿಎಆರ್, ಮತ್ತು ಭದ್ರತಾ ಪಡೆ ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ:09-03-1998ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ, ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪೊಲೀಸ್ ಇಲಾಖೆಯು ಒಂದು ಶಿಸ್ತಿನ ಇಲಾಖೆ ಆಗಿದ್ದು, ಯಾವುದೇ ಅಶಿಸ್ತನ್ನು ಸಹಿಸತಕ್ಕದ್ದಲ್ಲ. ಅರ್ಜಿದಾರರು ತಮ್ಮ ಸೇವಾ ಅವಧಿಯಲ್ಲಿ

ಯಾವುದೇ ಶಿಕ್ಷೆಗೆ ಒಳಗಾಗಿಲ್ಲವೆಂದು ತಿಳಿಸಿದ್ದರೂ, ಮೇಲಾಧಿಕಾರಿಯ ವಿರುದ್ದ ಏರು ಧ್ವನಿಯಲ್ಲಿ ಏಕ ವಚನದಲ್ಲಿ ಅಸಭ್ಯವಾಗಿ ಕೂಗಾಡಿರುವುದು ಅರ್ಜಿದಾರರ ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ತೋರಿಸುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 109 ಪೊಸಿಅ 2004, ಬೆಂಗಳೂರು, ದಿನಾಂಕ:21ನೇ ನವೆಂಬರ್, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಕೆ.ಶ್ರೀನಿವಾಸಮೂರ್ತಿ ಹಾಲಿ ಎಹೆಚ್‌ಸಿ 663, ಸಿಎಆರ್,ಕೇಂದ್ರ ಬೆಂಗಳೂರು ನಗರ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:02-06-2004ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಹೆಚ್.ಕೆ. ಗುಂಡೂರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

ಪಿ.ಆರ್.1707

**ವಿಷಯ:** ಶ್ರೀ ಎಸ್.ಚಂದ್ರಾಚಾರಿ, ಸಿಪಿಸಿ 731, ನರಸಿಂಹರಾಜ ಪೊಲೀಸ್ ಠಾಣೆ, ಮೈಸೂರು ನಗರ ರವರು ಸರ್ಕಾರಕ್ಕೆ ಸಲ್ಲಿಸಿರುವ, ಪರಿಷ್ಕರಣ ಮೇಲ್ಮನವಿ ಅರ್ಜಿಯ ಬಗ್ಗೆ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಆಯುಕ್ತರು, ಕೇಂದ್ರ ಸ್ಥಾನ ಸಂಚಾರ ಮತ್ತು ಅಪರಾಧ ಮೈಸೂರು ನಗರ, ಇವರ ಆದೇಶ ಸಂಖ್ಯೆ:ಇವಿ/7/2004-05, ಓಬಿ ಸಂಖ್ಯೆ:507/2004-05, ದಿನಾಂಕ:27-01-2005.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಕಮೀಷನರ್, ಮೈಸೂರು ನಗರ ಇವರ ಆದೇಶ ಸಂಖ್ಯೆ:ಇವಿ/ಮೇಲ್ಮನವಿ/38/2004-05, ಓಬಿ ಸಂಖ್ಯೆ:551/2004-05, ದಿನಾಂಕ:28-02-2005.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:30-03-2005.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು,ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/38/2005, ದಿನಾಂಕ:20-05-2005.

**ಪ್ರಸ್ತಾವನೆ:**

ಶ್ರೀ ಎಸ್.ಚಂದ್ರಾಚಾರಿ, ಸಿಪಿಸಿ 731, ನರಸಿಂಹರಾಜ ಪೊಲೀಸ್ ಠಾಣೆ, ಮೈಸೂರು ನಗರ ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

"ಆಪಾದಿತ ಪೊಲೀಸ್ ಅಧಿಕಾರಿಯವರು ದಿನಾಂಕ:12-09-2003 ರಿಂದ ಅನಧಿಕೃತವಾಗಿ ಗೈರುಹಾಜರಾಗಿ, ಗೈರುಹಾಜರಿ ಅವಧಿ 21 ದಿನಗಳಿಗೆ ಮೀರಿದ್ದರಿಂದ, ಕರ್ನಾಟಕ ಪೊಲೀಸ್ ಕೈಪಿಡಿ ಆದೇಶ 525ರ ಪ್ರಕಾರ ದಿನಾಂಕ:16-10-2003ರಂದು ಪಲಾಯಿತರೆಂದು ಪರಿಗಣಿಸಿ, ನೀಡಿದ್ದ ನೋಟಿಸನ್ನು ಸ್ವೀಕರಿಸಿದ ಕೂಡಲೇ ಕರ್ತವ್ಯಕ್ಕೆ ಹಾಜರಾಗದೇ, 120 ದಿನಗಳಿಗಿಂತ ಹೆಚ್ಚಿಗೆ ಅವಧಿಗೆ ಅನಧಿಕೃತವಾಗಿ ಗೈರುಹಾಜರಾಗುವುದರ ಮೂಲಕ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆ, ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವ / ನಡೆದುಕೊಂಡಿರುವ ಬಗ್ಗೆ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಆಯುಕ್ತರು, ಮೈಸೂರು ನಗರ, ಇವರು ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ:27-01-2005ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾ ಮಾಡಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ್ದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ, ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಕಮೀಷನರ್ ಮೈಸೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲದಿದ್ದರೂ, ಅರ್ಜಿದಾರರ ಕುಟುಂಬದ ಹಿತದೃಷ್ಟಿಯಿಂದ ಶಿಸ್ತು ಪ್ರಾಧಿಕಾರಿಯ ಆದೇಶವನ್ನು ಭಾಗಶ: ಮಾರ್ಪಡಿಸಿ ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ:28-02-2005ರ ಆದೇಶದಲ್ಲಿ ಅರ್ಜಿದಾರರನ್ನು 'ಕಡ್ಡಾಯ ನಿವೃತ್ತಿ' ಮಾಡಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ, ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಅವರ 22 ವರ್ಷಗಳ ಸೇವಾ ಅವಧಿಯಲ್ಲಿ ಯಾವುದೇ ರೀತಿಯ ಶಿಕ್ಷೆ ಅಥವಾ ದಂಡನೆಗೆ ಒಳಗಾಗದಿರುವುದು ಅವರ ಸೇವಾ ಪುಸ್ತಕದಲ್ಲಿ ಕಂಡುಬರುತ್ತದೆ. ಅರ್ಜಿದಾರರು ಬಿಪಿ ಹಾಗೂ ಶುಗರ್ ಪೇಶೆಂಟ್ ಆಗಿದ್ದು, ವೈದ್ಯಾಧಿಕಾರಿಗಳ ಸಲಹೆ ಮೇರೆಗೆ ಕರ್ತವ್ಯಕ್ಕೆ ಹಾಜರಾಗದಿರುವುದು ಇಲಾಖಾ ವಿಚಾರಣೆಯಲ್ಲಿ ಸಾಬೀತಾಗಿದೆ. ಶಿಸ್ತು ಪ್ರಾಧಿಕಾರಿ ಸೇವೆಯಿಂದ ವಜಾ ಮಾಡಿರುವುದನ್ನು ಮಾರ್ಪಡಿಸಿ, ಮೇಲ್ಮನವಿ ಪ್ರಾಧಿಕಾರಿ ಮಾನವೀಯ ದೃಷ್ಟಿಯಿಂದ ಅರ್ಜಿದಾರರನ್ನು ಕಡ್ಡಾಯ ನಿವೃತ್ತಿಗೊಳಿಸಿರುತ್ತಾರೆ. ಆದ್ದರಿಂದ, ಈ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 101 ಪೊಸಿಅ 2005, ಬೆಂಗಳೂರು, ದಿನಾಂಕ:21ನೇ ನವೆಂಬರ್, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಸ್.ಚಂದ್ರಾಚಾರಿ, ಸಿಪಿಸಿ 731, ನರಸಿಂಹರಾಜ ಪೊಲೀಸ್ ಠಾಣೆ, ಮೈಸೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:30-03-2005ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಕೆ. ಗುಂಡೂರಾವ್**

ಪಿ.ಆರ್.1708

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**ವಿಷಯ:** ಶ್ರೀ ಆರ್.ರವಿ.ಪಿಸಿ 6989, ವಿಧಾನ ಸೌಧ, ಪೊಲೀಸ್ ಠಾಣೆ, ಬೆಂಗಳೂರು ನಗರ ರವರು ಸರ್ಕಾರಕ್ಕೆ ಸಲ್ಲಿಸಿರುವ, ಪರಿಷ್ಕರಣ ಮೇಲ್ಮನವಿ ಅರ್ಜಿಯ ಬಗ್ಗೆ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಆಯುಕ್ತರು, ದಕ್ಷಿಣ ವಿಭಾಗ, ಬೆಂಗಳೂರು, ಇವರ ಆದೇಶ ಸಂಖ್ಯೆ:ಡಿಇ/ಆರ್6/13/ಡಿಸಿಪಿ /ದ/03 ಓಬಿ ಸಂಖ್ಯೆ:214/04 ಡಿಇ/ಆರ್6/71/96, ದಿನಾಂಕ:25-10-2004.
2. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:28-01-2005.
3. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು,ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/30/2005, ದಿನಾಂಕ:21-06-2005.

**ಪ್ರಸ್ತಾವನೆ:**

ಶ್ರೀ ಆರ್.ವಿ.ಪಿಸಿ 6989 ವಿಧಾನ ಸೌಧ, ಪೊಲೀಸ್ ಠಾಣೆ ಬೆಂಗಳೂರು ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

"ಶ್ರೀ ರವಿ ಪಿಸಿ 6989, ಕೋರಮಂಗಲ ಪೊಲೀಸ್ ಠಾಣೆ, ಆದ ನೀವು ಶ್ರೀ ಮಹಮದ್ ಇಮ್ತಿಯಾಸ್, ಮರಿಸ್ವಾಮಪ್ಪ ಲೇನ್, ಕುಂಬಾರಪೇಟೆ, ಬೆಂಗಳೂರು ಇವರಿಂದ ಸ್ಯಾಂಡಲ್‌ವುಡ್ ವಿಚಾರದಲ್ಲಿ ರೂ.10,000/-ಗಳನ್ನು ಲಂಚವಾಗಿ ಕೊಡಬೇಕೆಂದು ಹೇಳಿ, ನಂತರ ರೂ.4,000/-ಗಳಿಗೆ ಇತ್ಯರ್ಥ ಪಡಿಸಿಕೊಂಡು, ರೂ.1,000/-ಗಳನ್ನು ಮುಂಗಡವಾಗಿ ಪಡೆದುಕೊಂಡು, ನಂತರ ರೂ.3,000/-ಗಳನ್ನು ದಿನಾಂಕ:02-08-1994ರಂದು ಸಿಟಿ ಮಾರ್ಕೆಟ್ ಮಸೀದಿ ಹತ್ತಿರ ಫಿರ್ಯಾದುದಾರರಿಂದ ಪಡೆದುಕೊಂಡು ನಿಮ್ಮ ಸ್ಕೂಟರಿನಲ್ಲಿ ಹೊರಟು ಹೋಗುವಾಗ ಲೋಕಾಯುಕ್ತ ಪೊಲೀಸ್‌ರು ನಿಮ್ಮನ್ನು ಜೀಪಿನಲ್ಲಿ ಬೆನ್ನಟ್ಟಿಕೊಂಡು ಬಂದು ಬನ್ನೇರುಘಟ್ಟ ರಸ್ತೆಯಲ್ಲಿ ಹಿಡಿದು, ನಿಮ್ಮಿಂದ ಲಂಚದ ಹಣವನ್ನು ಅಮಾನತ್ತುಪಡಿಸಿಕೊಂಡು, ದಸ್ತಗಿರಿ ಮಾಡಿ, ನ್ಯಾಯಾಂಗ ಬಂಧನಕ್ಕೆ ಒಳಪಡಿಸಿರುತ್ತಾರೆ. ನೀವು ಶಿಸ್ತಿನ ಇಲಾಖೆಯಲ್ಲಿದ್ದು, ಲಂಚಕ್ಕೆ ಆಸೆಪಟ್ಟು, ಲೋಕಾಯುಕ್ತ ಪೊಲೀಸ್‌ರಿಗೆ ಸಿಕ್ಕಿಕೊಂಡು, ಕರ್ತವ್ಯದಲ್ಲಿ ತೀವ್ರತರವಾದ ದುರ್ನಡತೆ ಪ್ರದರ್ಶಿಸಿರುತ್ತೀರಿ. ಇದು ಶಿಸ್ತು ಇಲಾಖೆಗೆ ತಕ್ಕಂತಹ ನಡವಳಿಯಾಗಿರುವುದಿಲ್ಲ. ಈ ಬಗ್ಗೆ ನಿಮ್ಮನ್ನು ದಿನಾಂಕ:02-08-1994 ರಿಂದ 28-03-1996 ರವರೆಗೆ ಅಮಾನತ್ತಿನಲ್ಲಿಡಲಾಗಿತ್ತು, ಎಂಬ ಆರೋಪ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಅಭಿಯೋಗ ಸಾಕ್ಷಿಗಳ ಹೇಳಿಕೆಗಳಲ್ಲಿ ವ್ಯತ್ಯಾಸವಿರುವುದರಿಂದ, ಆರೋಪ ಸಾಬೀತಾಗಿಲ್ಲವೆಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಹಾಗೂ ಅದರ ನಂತರ ನ್ಯಾಯಾಲಯದಲ್ಲಿ ಈ ಪ್ರಕರಣದಲ್ಲಿ ಅರ್ಜಿದಾರರನ್ನು ಖುಲಾಸೆ ಮಾಡಿರುವುದನ್ನು ಗಮನದಲ್ಲಿಟ್ಟುಕೊಂಡು ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಆಯುಕ್ತರು, (ದಕ್ಷಿಣ) ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ:25-10-2004ರ ಆದೇಶದಲ್ಲಿ ಅರ್ಜಿದಾರರನ್ನು ದೋಷಮುಕ್ತರನ್ನಾಗಿ ಮಾಡಿ, ಅಮಾನತ್ತಿನಲ್ಲಿ ಕಳೆದ ಅವಧಿಯನ್ನು (ದಿನಾಂಕ:02-08-1994 ರಿಂದ 28-03-1996 ರವರೆಗೆ) ಅವರ ಖಾತೆಯಲ್ಲಿರುವ ರಜೆ ಎಂದು ಪರಿಗಣಿಸಿರುತ್ತಾರೆ.

ಈ ಆದೇಶದ ವಿರುದ್ಧ, ಅರ್ಜಿದಾರರು ಸರ್ಕಾರಕ್ಕೆ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ನ್ಯಾಯಾಲಯವು ತಮ್ಮನ್ನು ಈ ಪ್ರಕರಣದಲ್ಲಿ ಖುಲಾಸೆ ಮಾಡಿರುವ ಕಾರಣ ಹಾಗೂ ವಿಚಾರಣಾಧಿಕಾರಿಗಳು ಆರೋಪ ರುಜುವಾತಾಗಿಲ್ಲ ಎಂದು ತಿಳಿಸಿರುವ ಕಾರಣ, ರಜೆ ಎಂದು ಪರಿಗಣಿಸಿರುವ ಅವಧಿಯನ್ನು `ಕರ್ತವ್ಯದ ಮೇಲೆ` ಎಂದು ಪರಿಗಣಿಸಿ, ಅರ್ಹವಿರುವ ವೇತನ ಭತ್ಯೆಗಳನ್ನು ಒದಗಿಸುವಂತೆ ಕೋರಿರುತ್ತಾರೆ. ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಕರ್ತವ್ಯಕ್ಕೆ ಹಾಜರಾಗದೇ, ಕಚೇರಿಯಿಂದ ಹೊರಗುಳಿದು, ಆ ಅವಧಿಯನ್ನು ತಾವು ದೋಷಮುಕ್ತರೆಂಬ ಹಿನ್ನೆಲೆಯಲ್ಲಿ 'ಕರ್ತವ್ಯದ ಮೇಲೆ' ಎಂದು ಪರಿಗಣಿಸಲು ಕೋರಿದ್ದು, ಕರ್ತವ್ಯಕ್ಕೆ ಹಾಜರಾಗದ ಅವಧಿಗೆ `ಕರ್ತವ್ಯದ ಮೇಲೆ` ಎಂದು ಪರಿಗಣಿಸಲು ಸಾಧ್ಯವಿರುವುದಿಲ್ಲ. ಅರ್ಜಿದಾರರು ಕೆಸಿಎಸ್‌ಆರ್‌ನ ನಿಯಮಗಳ ರೀತ್ಯಾ ರಜಾ ಅರ್ಜಿ ನೀಡಿ, ಸದರಿ ಅವಧಿಗೆ ರಜೆ ಮಂಜೂರು ಮಾಡಿಸಿಕೊಳ್ಳತಕ್ಕದ್ದು. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 68 ಪೊಸಿಅ 2005, ಬೆಂಗಳೂರು, ದಿನಾಂಕ:23ನೇ ನವೆಂಬರ್, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಆರ್.ರವಿ ಪಿಸಿ 6989, ವಿಧಾನ ಸೌಧ, ಪೊಲೀಸ್ ಠಾಣೆ, ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:28-01-2005ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಕೆ. ಗುಂಡೂರಾವ್**

ಪಿ.ಆರ್.1709

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**ವಿಷಯ:** ಶ್ರೀ ಬಿ.ಟಿ.ಚಂದ್ರಪ್ಪ (ನಿವೃತ್ತ), ಹವಲ್ದಾರ್ ಕೆಎಸ್‌ಆರ್‌ಪಿ, ಬೆಂಗಳೂರು ರವರನ್ನು ಕರ್ತವ್ಯಕ್ಕೆ ಪುನರ್ ನೇಮಕ ಮಾಡುವ ಬಗ್ಗೆ ಮನವಿ.

**ಓದಲಾಗಿದೆ:**

1. ಶಿಸ್ತು ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಕೆಎಸ್‌ಆರ್‌ಪಿ,ಬೆಂಗಳೂರು, ಇವರ ಆದೇಶ ಸಂಖ್ಯೆ:ಡಿಇ/39/2003-04, ದಿನಾಂಕ:31-05-2004.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಬೆಂಗಳೂರು, ಇವರ ಆದೇಶ ಸಂಖ್ಯೆ:ಅಪೀಲು /6/18/2004-05, ದಿನಾಂಕ:07-10-2004.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:23-02-2005.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು,ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/7/2005, ದಿನಾಂಕ:21-06-2005.

**ಪ್ರಸ್ತಾವನೆ:**

ಶ್ರೀ ಬಿ.ಟಿ.ಚಂದ್ರಪ್ಪ (ನಿವೃತ್ತ) ಹವಲ್ದಾರ್, ಕೆಎಸ್‌ಆರ್‌ಪಿ, ಬೆಂಗಳೂರು, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

"1) 3ನೇ ಪಡೆ, ಕೆಎಸ್‌ಆರ್‌ಪಿ 'ಬಿ' ದಳ ಬೆಂಗಳೂರು ರವರಲ್ಲಿ ಸೇವೆ ಸಲ್ಲಿಸುತ್ತಿರುವ ಶ್ರೀ ಟಿ.ಬಿ.ಚಂದ್ರಪ್ಪ ಹವಲ್ದಾರ್ 148 ಆದ ನೀವು 3ನೇ ಪಡೆ ಕಮಾಂಡೆಂಟ್, ಬೆಂಗಳೂರು ರವರು ಹೊರಡಿಸಿದಂತಹ ದೋಷಾರೋಪಣಾ ಪತ್ರ ಸಂಖ್ಯೆ:ಸಿಬ್ಬಂದಿ-4/ಡಿಇ/78/2002-03, ದಿನಾಂಕ:06-03-2003 ಅನ್ನು ಜಾರಿ ಮಾಡಲು ಕಂಪನಿ ಕಮಾಂಡೆರ್, `ಬಿ` ದಳ 3ನೇ ಪಡೆ ಕೆಎಸ್‌ಆರ್‌ಪಿ, ಬೆಂಗಳೂರು ರವರು ದಳದ ಗುಮಾಸ್ತರಾದ ಶ್ರೀ ರುದ್ರಮುನಿ ಪಿಸಿ-301, `ಬಿ` ದಳ 3ನೇ ಪಡೆ, ಕೆಎಸ್‌ಆರ್‌ಪಿ, ಬೆಂಗಳೂರು ರವರಿಗೆ ದಿನಾಂಕ:07-03-2003ರಂದು ದೋಷಾರೋಪಣಾ ಪತ್ರ ಜಾರಿ ಮಾಡಲು ತಿಳಿಸಲಾಗಿ, ಈ ದೋಷಾರೋಪಣಾ ಪತ್ರವನ್ನು ಜಾರಿ ಮಾಡಲು ಹೋದ ಸಂದರ್ಭದಲ್ಲಿ ನೀವು ದೋಷರೋಪಣಾ ಪತ್ರವನ್ನು ಪಡೆಯದೇ ಈಗ ತೆಗೆದುಕೊಳ್ಳುವುದಿಲ್ಲ ಎಂದು ನಿರಾಕರಿಸಿ, ಉದ್ಧಟನತನದಿಂದ ವರ್ತಿಸಿ, ಅಶಿಸ್ತು ಮತ್ತು ದುರ್ನಡತೆ ಪ್ರದರ್ಶಿಸಿರುವುದು.

2) ದಿನಾಂಕ:07-03-2003 ಮತ್ತು 08-03-2003ರಂದು ಕಂಪೆನಿ ಕಮಾಂಡೆರ್, `ಬಿ` ದಳ 3ನೇ ಪಡೆ, ಕೆಎಸ್‌ಆರ್‌ಪಿ, ಬೆಂಗಳೂರು ರವರ ಆದೇಶದಂತೆ ಶ್ರೀ ಪುಟ್ಟಮಾದಯ್ಯ ಹವಲ್ದಾರ್-14, ಬಿ ದಳ, 3ನೇ ಪಡೆ, ಕೆಎಸ್‌ಆರ್‌ಪಿ, ಬೆಂಗಳೂರು ರವರು ಪುನ: ಸದರಿ ದೋಷಾರೋಪಣಾ ಪತ್ರವನ್ನು ಜಾರಿ ಮಾಡಲು ಹೋದಾಗಲು ಸಹ ದೋಷಾರೋಪಣಾ ಪತ್ರವನ್ನು ಪಡೆಯದೇ ನಾನು ಕರ್ತವ್ಯದಲ್ಲಿದ್ದೇನೆ (ಡ್ಯೂಟಿ ಎನ್‌ಸಿಟಿ) ನಾನು ಡ್ಯೂಟಿ ಇಳಿದ ಮೇಲೆ ಕೊಡಿ ಎಂದು ನಿರಾಕರಿಸಿ, ದುರ್ನಡತೆ ಹಾಗೂ ಬೇಜವಾಬ್ದಾರಿತನದಿಂದ ವರ್ತಿಸಿರುವುದು.

3) ದಿನಾಂಕ:09-03-2003ರಂದು ಹಗಲು ನಗರ ಕರ್ತವ್ಯಕ್ಕೆ ನಿಯೋಜನೆಗೊಂಡ ಶ್ರೀ ಜಾಂದಕವಟಿ, ಎಆರ್‌ಎಸ್‌ಐ ರವರ ನೇತೃತ್ವದಲ್ಲಿ ಕರ್ತವ್ಯವನ್ನು ನಿರ್ವಹಿಸಲು ನಿಮ್ಮನ್ನು ನಿಯೋಜಿಸಲಾಗಿತ್ತು. ಅಂದು ನಿಮಗೆ ಸದರಿ ದೋಷಾರೋಪಣಾ ಪತ್ರವನ್ನು ಜಾರಿ ಮಾಡುವ ಸಂಬಂಧ ಕಂಪೆನಿ ಕಮಾಂಡರ್, `ಬಿ` ದಳ ರವರು ಸದರಿ ತುಕಡಿಯ ರಹದಾರಿ ಪತ್ರ ಪಡೆದು ಪರಿಶೀಲಿಸಿ, ನಂತರ ಸಹಾಯಕ ಕಮಾಂಡೆಂಟ್-1 ಸಾಹೇಬರವರಿಗೆ ವರದಿ ನೀಡಿದರು. ನಂತರ ಕಂಪೆನಿ ಕಮಾಂಡರ್ `ಬಿ` ದಳ ರವರು ಮತ್ತು ಸಹಾಯಕ ಕಮಾಂಡೆಂಟ್-1 ರವರು ನಿಮಗೆ ದೋಷಾರೋಪಣಾ ಪತ್ರವನ್ನು ಪಡೆದುಕೊಳ್ಳುವಂತೆ 3ನೇ ಸಲ ತಿಳಿಸಿದ್ದರೂ, ನೀವು ಸದರಿ ದೋಷಾರೋಪಣಾ ಪತ್ರವನ್ನು ಪಡೆಯದೆ, ಕಂಪೆನಿ ಕಮಾಂಡರ್ ರವರನ್ನು ಅವಾಚ್ಯ ಶಬ್ದಗಳಿಂದ ಬೈದು ನಿಂದಿಸಿರುವುದಲ್ಲದೆ, ಸಹಾಯಕ ಕಮಾಂಡೆಂಟ್-1 ರವರೊಂದಿಗೆ ಕೂಡ ವಾದ ನಡೆಸಿ, ಅಶಿಸ್ತನ್ನು ಪ್ರದರ್ಶಿಸಿರುತ್ತೀರಿ.

4) ದಿನಾಂಕ:09-03-2003ರಂದು ಎಆರ್‌ಎಸ್‌ಐ, ಜಾಂದಕವಟಿ ರವರು ತುಕಡಿಯಲ್ಲಿದ್ದು, ಹಗಲು ನಗರ ಕರ್ತವ್ಯಕ್ಕೆಂದು ಕೇಂದ್ರ ಸ್ಥಾನ ಬಿಟ್ಟು ತೆರಳುವ ಸಮಯದಲ್ಲಿ, ನೀವು ವಾಹನದಲ್ಲಿ ಸುಮ್ಮನೆ ಕುಳಿತುಕೊಳ್ಳದೆ, 3ನೇ ಪಡೆಯ ಎಲ್ಲಾ ಹಿರಿಯ ಅಧಿಕಾರಿಗಳಿಗೂ ಅವಾಚ್ಯ ಶಬ್ದಗಳಿಂದ ಬೈದು, ಎಆರ್‌ಎಸ್‌ಐ, ಜಾಂದಕವಟಿ ರವರನ್ನು ಕುರಿತು, ನೀವು ಯಾವ ಮೇಜರ್ ಗಾಂಡೂ, ಸೂಳೆ ಮಗನೆ ಅಂತಾ ಅವಾಚ್ಯ ಶಬ್ದಗಳಿಂದ ಬೈದಿರುವುದಲ್ಲದೆ, ಅಮ್ಮಾ, ಅಪ್ಪಾ, ಅಕ್ಕಾ, ತಂಗಿ, ಹಾಗೂ ಹೆಂಡತಿಗೂ ಸೇರಿಸಿಕೊಂಡು ಬಾಯಿಗೆ ಬಂದ ಹಾಗೆ ಬೈದಿರುತ್ತೀರಿ. ಅಲ್ಲದೆ, ಜಾಂದಕವಟಿ ರವರನ್ನು ಹೊಡೆಯಲು ಯತ್ನಿಸಿದಾಗ ತುಕಡಿಯಲ್ಲಿದ್ದ ಹವಲ್ದಾರ್-119, ರಾಜೇಗೌಡ ಎಂಬುವರು ಬಿಡಿಸಿರುತ್ತಾರೆ. ನೀವು ಒಬ್ಬ ಹಿರಿಯ ಅಧಿಕಾರಿಗೆ ಹೊಡೆಯಲು ಪ್ರಯತ್ನಿಸಿ, ಅವಾಚ್ಯ ಶಬ್ದಗಳಿಂದ ಬೈದು ಕರ್ತವ್ಯದಲ್ಲಿ ಲೋಪ ಎಸಗಿ ದುರ್ನಡತೆ ಪ್ರದರ್ಶಿಸಿರುತ್ತೀರಿ.

5) ದಿನಾಂಕ:10-03-2003ರಂದು ಮಾನ್ಯ ಕಮಾಂಡೆಂಟ್, 3ನೇ ಪಡೆ, ಕೆಎಸ್‌ಆರ್‌ಪಿ ರವರ ಮೌಖಿಕ ಅದೇಶದಂತೆ 4ನೇ ಬಾರಿ ಖುದ್ದಾಗಿ ಶ್ರೀ ಎಸ್.ನಾರಾಯಣಸ್ವಾಮಿ, ಆರ್‌ಪಿಐ `ಬಿ`ದಳ ಹಾಗೂ ಅಂದು ಡ್ಯೂಟಿ ಆಫೀಸರ್ ಇದ್ದಂತಹ ಶ್ರೀ ಗುರುಮೂರ್ತಿಮಠ, ಸ್ಪೆಷಲ್ ಆರ್‌ಎಸ್‌ಐ, ಮತ್ತು ಹವಲ್ದಾರ್ ಸಂಖ್ಯೆ:14, ಶ್ರೀ ಪುಟ್ಟ ಮಾದಯ್ಯ (ಹವಲ್ದಾರ್ ಮೇಜರ್) ರವರುಗಳು ಶ್ರೀ ಮೋಹನ್, ಸ್ಪೆಷಲ್ ಆರ್‌ಎಸ್‌ಐ ರವರ ನೇತೃತ್ವದಲ್ಲಿ, ಹಗಲು ನಗರ ಕರ್ತವ್ಯದಲ್ಲಿದ್ದ ನಿಮಗೆ ದೋಷಾರೋಪಣಾ ಪತ್ರವನ್ನು ಜಾರಿ ಮಾಡಲು ಬಂದಾಗ, ನೀವು ಆ ದೋಷಾರೋಪಣಾ ಪತ್ರವನ್ನು ಪಡೆಯದೇ, ಅದನ್ನು ಬಿಸಾಡಿ ಎಂದು ಹೇಳಿರುವುದಲ್ಲದೆ, ಅಲ್ಲಿ ಇದ್ದಂತಹ ಹಿರಿಯ ಅಧಿಕಾರಿಗಳಿಗೆ ಅವಾಚ್ಯ ಶಬ್ದಗಳಿಂದ ಬೈದು, ಎಲ್ಲಾ ಸಿಬ್ಬಂದಿಗಳೆದುರು ಅವಮಾನಗೊಳಿಸಿರುವುದಲ್ಲದೆ, ಕರ್ತವ್ಯದಲ್ಲಿ ಅಶಿಸ್ತು ಪ್ರದರ್ಶಿಸಿ, ಮೇಲಧಿಕಾರಿಗಳ ಆದೇಶವನ್ನು ಉಲ್ಲಂಘಿಸಿ, ಮೇಲಧಿಕಾರಿಗಳ ಮೇಲೆ ಕೈಮಾಡಿ, ಅಶಿಸ್ತಿನಿಂದ ವರ್ತಿಸಿ, ಕರ್ತವ್ಯದಲ್ಲಿ ಲೋಪವೆಸಗಿರುತ್ತೀರಿ.

6) ದಿನಾಂಕ:01-04-2003ರಂದು ನಿಮಗೆ ಆರ್‌ಎಸ್‌ಐ ಅಪ್ಪಯ್ಯ ರವರ ನೇತೃತ್ವದಲ್ಲಿ ಬಿ - 2 ತುಕಡಿಯೊಂದಿಗೆ ನಿಲುಗಡೆ ಕರ್ತವ್ಯವನ್ನು ನಿರ್ವಹಿಸಲು ನಿಯೋಜಿಸಲಾಗಿತ್ತು. ಅದರಂತೆ ನೀವು ಅಂದು ಕೆಎಸ್‌ಆರ್‌ಪಿ ನಿಯಂತ್ರಣ ಕೊಠಡಿಯಲ್ಲಿ ನಿಲುಗಡೆ ಕರ್ತವ್ಯದಲ್ಲಿದ್ದಾಗ ನಿಮಗೆ ಮಾನ್ಯ ಕಮಾಂಡೆಂಟ್ 3ನೇ ಪಡೆ, ರವರ ನೇಮಕಾತಿ ಆದೇಶ ಸಂಖ್ಯೆ:ಡಿಇ/88/2002-03, ದಿನಾಂಕ:29-03-2003 ಅನ್ನು ಜಾರಿ ಮಾಡಲು ಕಂಪೆನಿ ಕಮಾಂಡರ್, ಬಿ-ದಳ ರವರು ಹವಲ್ದಾರ್ ಮೇಜರ್ ರವರಾದ ಶ್ರೀ ಜಾಂದಕವಟಿ ರವರನ್ನು ನೇಮಿಸಿ ಕಳುಹಿಸಿಕೊಡಲಾಗಿತ್ತು. ಅದರಂತೆ ಶ್ರೀ ಜಾಂದಕವಟಿ ರವರು ಡಿ-2 ತುಕಡಿಯ ತುಕಡಿ ನಾಯಕರಾದ ಹೆಚ್‌ಎ ಅಪ್ಪಯ್ಯ ಆರ್‌ಎಸ್‌ಐ ಹಾಗೂ ಹವಲ್ದಾರ್ 126 ಶ್ರೀ ಎಸ್.ಎಸ್.ಶಿರೋಳ್ ಇವರ ಸಮ್ಮುಖದಲ್ಲಿ ಸದರಿ ನೇಮಕಾತಿ ಆದೇಶವನ್ನು ಜಾರಿ ಮಾಡಲು ಬಂದಾಗ, ಪುನ:ಈ ಹಿಂದೆ ದೋಷಾರೋಪಣಾ ಪತ್ರವನ್ನು ಪಡೆಯದೆ ತಿರಸ್ಕರಿಸಿದ ಹಾಗೆ,

ಈಗಲೂ ಸಹ ತಿರಸ್ಕರಿಸಿ, ಎಲ್ಲಾ ಸಿಬ್ಬಂದಿಯವರ ಮುಂದೆ ಹಿರಿಯ ಅಧಿಕಾರಿಗಳನ್ನು ಸೇರಿಸಿ, "ನನ್ನನ್ನು ಏನು ಮಾಡಲಿಕ್ಕಾಗುವುದಿಲ್ಲ ನಾನು ಅವರ ಮೇಲೆಯೇ ತಿರುಗಿಸಿ ಬರೆದು, ಮನೆಗೆ ಕಳುಹಿಸುತ್ತೇನೆಂದು" ಹೇಳುತ್ತಾ, ಅಶಿಸ್ತಿನಿಂದ ವರ್ತಿಸಿ, ಕರ್ತವ್ಯದಲ್ಲಿ ಲೋಪವೆಸಗಿ, ದುರ್ನಡತೆ ಪ್ರದರ್ಶಿಸಿರುವುದು ನಿಮ್ಮ ಮೇಲಿನ ಆರೋಪವಾಗಿರುತ್ತದೆ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಕೆಎಸ್‌ಆರ್‌ಪಿ ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ:31-05-2004ರ ಆದೇಶದಲ್ಲಿ ಅರ್ಜಿದಾರರನ್ನು ಕಡ್ಡಾಯ ನಿವೃತ್ತಿ ಗೊಳಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ್ದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ, ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ:07-10-2004ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ, ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಈ ಮಧ್ಯೆ ಅರ್ಜಿದಾರರು ದಿನಾಂಕ:31-05-2004ರ ಆದೇಶದ ವಿರುದ್ಧ ಸಲ್ಲಿಸಿದ್ದ ಮೇಲ್ಮನವಿ ಬಗ್ಗೆ ತಿಳಿಸಿ, ನಿವೃತ್ತಿ ವೇತನದ ಆರ್ಥಿಕ ಸೌಲಭ್ಯಗಳನ್ನು ತಡೆಹಿಡಿಯುವಂತೆ ದಿನಾಂಕ:20-11-2004ರ ತಮ್ಮ ಮನವಿಯಲ್ಲಿ ಕೋರಿದ್ದು, ನಂತರ ದಿನಾಂಕ:13-12-2004ರ ತಮ್ಮ ಮನವಿಯಲ್ಲಿ ವಿಶ್ರಾಂತಿ ವೇತನ ಮಂಜೂರು ಮಾಡುವಂತೆ ಕೋರಿರುತ್ತಾರೆ. ಅದರನ್ವಯ ವೇತನ ನಿಗದಿಪಡಿಸಿ, ವಿಶ್ರಾಂತಿ ವೇತನದ ಪ್ರಸ್ತಾವನೆಯನ್ನು ಮಹಾಲೇಖಪಾಲರಿಗೆ ಕಳುಹಿಸಿದ್ದು, ಮಹಾಲೇಖಪಾಲರು ಅರ್ಹ ವಿಶ್ರಾಂತಿ ವೇತನ ಹಾಗೂ ಆರ್ಥಿಕ ಸೌಲಭ್ಯಗಳನ್ನು ಮಂಜೂರು ಮಾಡಿರುತ್ತಾರೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಇವರ ಉದ್ಧಟತನಕ್ಕೆ ಸಾಕ್ಷಿ ಆಗಿರುತ್ತದೆ. ಹಾಗೂ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಹೊಸದಾಗಿ ಪರಿಗಣಿಸುವಂತಹ ಯಾವುದೇ ಅಂಶಗಳಿಲ್ಲದಿರುವುದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 11 ಪೊಸಿಅ 2005, ಬೆಂಗಳೂರು, ದಿನಾಂಕ:22ನೇ ನವೆಂಬರ್, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಬಿ.ಟಿ.ಚಂದ್ರಪ್ಪ, (ನಿವೃತ್ತ) ಹವಲ್ದಾರ್, ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:23-02-2005ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಕೆ. ಗುಂಡೂರಾವ್**

ಪಿ.ಆರ್.1710

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

## ಕಂದಾಯ ಸಚಿವಾಲಯ

**ವಿಷಯ :** ಶಿರಾ ತಾಲ್ಲೂಕು, ಗೌಡಗೆರೆ ಗ್ರಾಮದ ಕಿರಿಯ ಮುಜರಾಯಿ ಸಂಸ್ಥೆಯಾದ ಶ್ರೀ ಹನುಮಂತ ದೇವರು ದೇವಸ್ಥಾನವನ್ನು ಹಳ್ಳಿಕಾರ ಜನಾಂಗಕ್ಕೆ ವರ್ಗಾಯಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಕಂಇ 77 ಮುಸೇವಿ 2003, ದಿನಾಂಕ: 30.04.2003.
2. ಧಾರ್ಮಿಕದತ್ತಿ ಆಯುಕ್ತರ ಪತ್ರ ಸಂಖ್ಯೆ: ಎಡಿಎಂ 6 (ಎ) ಸಿಆರ್ 134/ 01-02, ದಿನಾಂಕ: 05.08.2003, 18.11.2004.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಸಂಖ್ಯೆ (1)ರ ಅಧಿಸೂಚನೆಯಲ್ಲಿ ರಾಜ್ಯದಲ್ಲಿನ 34,265 ದೇವಸ್ಥಾನಗಳನ್ನು ಅಧಿಸೂಚಿತ ಸಂಸ್ಥೆಗಳನ್ನಾಗಿ ಪ್ರಕಟಿಸಿರುತ್ತದೆ. ಮೇಲೆ ಓದಲಾದ ಕ್ರಮಸಂಖ್ಯೆ (2)ರ ಪತ್ರದಲ್ಲಿ ತುಮಕೂರು ಜಿಲ್ಲೆ, ಶಿರಾ ತಾಲ್ಲೂಕು, ಗೌಡಗೆರೆ ಗ್ರಾಮದ ಶ್ರೀ ಹನುಮಂತ ದೇವರು ದೇವಸ್ಥಾನವು ಕ್ರಮಸಂಖ್ಯೆ 20 ಹಾಗೂ ಪುಟ ಸಂಖ್ಯೆ 693ರಲ್ಲಿ ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಪ್ರಕಟಿಸಿದೆ. ಸದರಿ ದೇವಾಲಯವನ್ನು ಸರ್ಕಾರದ ಹಂತದಲ್ಲಿ ಹಳ್ಳಿಕಾರ ಜನಾಂಗಕ್ಕೆ ವಹಿಸಿಕೊಡುವ ನಿರ್ಧಾರ ತೆಗೆದುಕೊಂಡಿರುವುದರಿಂದ ಡಿನೋಟಿಫೈ ಮಾಡಲು ಸೂಕ್ತ ಆದೇಶ ಹೊರಡಿಸುವಂತೆ ಕೋರಿದ್ದಾರೆ.

ಭಾರತೀಯ ಪುರಾತತ್ವ ಇಲಾಖೆ ಒದಗಿಸಿದ ಪ್ರಾಚೀನ ತಾಮ್ರ ತಗಡಿನ ಶಾಸನವೂ ಸದರಿ ದೇವಾಲಯ ಹಳ್ಳಿಕಾರ ಜನಾಂಗದವರಿಗೆ ಸೇರಿದ್ದೆಂಬ ಸಂಗತಿಯನ್ನು ಸಮರ್ಥಿಸುತ್ತದೆ. ಈ ಹಿನ್ನೆಲೆಯಲ್ಲಿ ಸರ್ಕಾರವು ಈ ಬಗ್ಗೆ ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಕಂಇ 12 ಮುಆಬಿ 2002, ಬೆಂಗಳೂರು, ದಿನಾಂಕ: 7ನೇ ಡಿಸೆಂಬರ್, 2005**

ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮದಾಯ ದತ್ತಿಗಳ ಅಧಿನಿಯಮ 1997ರ ಅಧಿನಿಯಮ 1ರ ಉಪನಿಯಮ 4(ii)ರ ಪ್ರಕಾರ ಒಂದು ಹಿಂದೂ ಧಾರ್ಮಿಕ ಪಂಗಡವು ಸ್ಥಾಪಿಸಿರುವ, ವ್ಯವಸ್ಥೆಗೊಳಿಸಿರುವ, ನಡೆಸುತ್ತಿರುವ ಅಥವಾ ನಿರ್ವಹಿಸುತ್ತಿರುವ ಯಾವುದೇ ಹಿಂದೂ ಧಾರ್ಮಿಕ ಸಂಸ್ಥೆಗೆ ಅಥವಾ ಧರ್ಮದಾಯ ದತ್ತಿಗೆ ಅನ್ವಯಿಸತಕ್ಕದ್ದಲ್ಲ ಎಂದಿರುವುದರಿಂದ ಸರ್ಕಾರವು ಹೊರಡಿಸಿರುವ ಅಧಿಸೂಚನೆ ಸಂಖ್ಯೆ: ಕಂಇ 77 ಮುಸೇವಿ 2003 ದಿನಾಂಕ: 30.04.2003ರ ಅಧಿಸೂಚಿತ ಪಟ್ಟಿಯಿಂದ ತುಮಕೂರು ಜಿಲ್ಲೆ, ಶಿರಾ ತಾಲ್ಲೂಕು, ಗೌಡಗೆರೆ ಗ್ರಾಮದ ಶ್ರೀ ಹನುಮಂತ ದೇವಸ್ಥಾನ, ಕ್ರಮಸಂಖ್ಯೆ 20 ಪುಟ 693ನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಹೊರತುಪಡಿಸಿ ಹಳ್ಳಿಕಾರ ಜನಾಂಗದವರಿಂದ ರಚಿಸಿ ನೊಂದಾಯಿಸಲ್ಪಟ್ಟ ಭಾವನಾತ್ಮಕ ಸಮಿತಿಯವರಿಗೆ ವಹಿಸಿಕೊಡಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ರಮೇಶ್ ಕೆ. ಜಾಗೀರ್‌ದಾರ್**

ಪಿ.ಆರ್.76

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಮುಜರಾಯಿ).